~ ಮಿಂಚಿನ ಬಳ್ಳಿ ~

# ಮುಂದುವರಿದ ಜಪಾನು

ಸಂಪಾದಕ:

ಬುರ್ಲಿ ಬಿಂದುಮಾಧವ





ಮಿಂಚಿನಬಳ್ಳಿಯ ಎರಡನೆಯ ವರುಷದ ಎರಡನೆ ಕುಡಿ

# ಮುಂದುವರಿದ ಜಪಾನು






ಲೇಖಕರು:

**ಕೆ. ಎಲ್. ನಂಜಪ್ಪ,**

ವಾಣಿಜ್ಯ ವಿಶ್ವವಿದ್ಯಾಲಯ, ಟೋಕಿಯೋ





ಚಾಲುಕ್ಯವಿಕ್ರಮ ವರುಷ, ೮೬೪

ಅಧಿಕ ಶ್ರಾವಣ ಪ್ರತಿಪದೆ

**೧೯೩೯**





ಸಾದಾ ಪ್ರತಿ ೧ ರೂ. — ಕ್ಯಾಲಿಕೊ ಪ್ರತಿ ೧ ರೂ. ೮ ಆ.

ಎರಡನೆ ವರುಷದ ಮೂರನೆಯ ಕುಡಿಯು

# ಮುಂದುವರಿದ ಜಪಾನು

(ಎರಡನೆಯ ಭಾಗ)

ಅಕ್ಟೋಬರದಲ್ಲಿ

# ನಮ್ಮ ಬಳ್ಳಿಯ ಪೋಷಕರು



ದಾವಣಗೆರೆಯ ಶ್ರೀ. ಗೌಡರ ಸಣ್ಣಮಹಲಿಂಗಪ್ಪನವರ ಮಕ್ಕಳಾದ

**ಶ್ರೀ. ಗೌಡರ ಗುರುಶಾಂತಪ್ಪನವರು.**

ಇವರು ಬ್ಯಾಂಕರರೂ ದೊಡ್ಡ ಜಮೀನದಾರರೂ ಇರುವರಲ್ಲದೆ ಮೈಸೂರು ಪ್ರಜೆಂಟೀಟಿವ್ಹ ಅಸೆಂಬ್ಲಿ ಮೆಂಬರರೂ ಮತ್ತು ಟೌನ ಮುನಸೀಪಲ್ ಸದಸ್ಯರೂ ಇದ್ದಾರೆ. ಸಾರ್ವಜನಿಕ ಸಂಸ್ಥೆಗಳಿಗೂ ಧಾರ್ಮಿಕ ಮಠಾಧಿಗಳಿಗೂ ಸಹಾಯ ವನ್ನಿತ್ತು ಒಳ್ಳೇ ಉದಾರಿಗಳೆಂದು ಹೆಸರು ಪಡೆದಿದ್ದಾರೆ. ಇದಲ್ಲದೆ ಹಗಲಿರುಳು ದೇಶದ ಕಲ್ಯಾಣಕ್ಕಾಗಿ ತಮ್ಮ ತನುಮನಧನದಿಂದ ಪ್ರಜಾಹಿತಕ್ಕೋಸ್ಕರವಾಗಿ ಶ್ರಮಬಡುತ್ತಲೇ ಇರುತ್ತಾರೆ.

ಓಂ

# ಒಂದು ಮಾತು

ಮುಂದುವರಿದ ಜಪಾನವು ಕನ್ನಡಿಗರ ಕೈಸೇರುತ್ತಲಿದೆ. ಇದು ಈ ವರುಷದ ಎರಡನೆಯ ಕುಡಿಯು. ಪಾಶ್ಚಾತ್ಯ ರಾಷ್ಟ್ರಗಳ ಆಕ್ರಮಣವನ್ನರಿತು ಸಕಾಲದಲ್ಲಿ ಎಚ್ಚತ್ತು, ಕಳೆದ ಅರ್ಧ ಶತಮಾನದಲ್ಲಿ ಭೌತಿಕ ಸುಧಾರಣೆಗಳ ಶಿಖರವನ್ನು ಮುಟ್ಟಿ, ಜಗತ್ತನ್ನೇ ಬೆರಗುಗೊಳಿಸಿ, ಜಪಾನ ರಾಷ್ಟ್ರವನ್ನು ಜಗತ್ತಿನೊಳಗಿನ ಮೊದಲನೆಯ ತರಗತಿಗೆ ಏರಿಸಿದ ಜಪಾನಿಗಳ ಅದ್ಭುತ ಸಾಹಸವು ಅವರ್ಣನೀಯುವಿದೆ. ಜಪಾನಿಗಳ ನವರಾಷ್ಟ್ರದ ಈ ನಿರ್ಮಾಣವು ಪಾರತಂತ್ರ್ಯದಲ್ಲಿರುವ ಪ್ರತಿಯೊಂದು ರಾಷ್ಟ್ರವೂ ಅನುಕರಿಸಲು ಯೋಗ್ಯವಾಗಿದೆ. ಅವರ ರಾಷ್ಟ್ರಾಭಿಮಾನವೂ ರಾಷ್ಟ್ರದ ಸಂಘಟನೆಯೂ ಆಚ್ಚರಿಗೊಳಿಸುತ್ತವೆ. ನವಭಾರತ ನಿರ್ಮಾಣದ ಈ ಸಮಯದಲ್ಲಿ ಜಾಗೃತ ಜಪಾನವು ಹೊಸ ಬೆಳಕನ್ನು ಕೊಡುವದೆಂದು ಭಾವಿಸಿದ್ದೇನೆ.

ಶ್ರೀ. ಕರಾಚೂರ ಸಂಜಪ್ಪನವರು, ನನ್ನ ಬಿನ್ನಹಕ್ಕೆ ಮನ್ನಣೆಯನ್ನಿತ್ತು ಜಪಾನದ ವಿವಿಧ ಜೀವನವನ್ನು ಅಭ್ಯಾಸಮಾಡಿ, ಕನ್ನಡಿಗರಿಗೆ ಒದಗಿಸಿ ಕೊಟ್ಟುದಕ್ಕಾಗಿ ನಾನು ಅವರಿಗೆ ಅತ್ಯಂತ ಋಣಿಯಾಗಿದ್ದೇನೆ.

ಶ್ರೀ. ಸಂಜಪ್ಪನವರು ಅಪ್ರತಿಮ ಮೇಧಾವಿಗಳು. ಟೋಕಿಯೋ ವಾಣಿಜ್ಯ ವಿಶ್ವವಿದ್ಯಾಲಯದಲ್ಲಿ ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾಗಿ, ವಿದ್ಯಾರ್ಥಿವೇತನವನ್ನು ಪಡೆದು, ಕನ್ನಡಿಗರ ಕೀರ್ತಿಯನ್ನು ಹೊರನಾಡುಗಳಲ್ಲಿಯೂ ಹರಡಿರುವರು. ಅವರ ಬರವಣಿಗೆಯಲ್ಲಿ ಕನ್ನಡ ನಾಡಿನ ಅಭಿಮಾನವೂ ರಾಷ್ಟ್ರಾಭಿಮಾನವೂ ತುಂಬಿ ತುಳುಕುತ್ತದೆ. ಅವರ ಗ್ರಂಥವೇ ಅವರ ಯೋಗ್ಯತೆಯನ್ನು ತೋರ್ಪಡಿಸುತ್ತದೆ.

ಅವರು ಅತ್ಯಂತ ಶ್ರಮವಹಿಸಿ, ಜಪಾನದ ವಿವಿಧಾಂಗಗಳನ್ನು ಕುರಿತು ಸುಮಾರು ೪೦೦ ಪುಟದ ಸಚಿತ್ರವಾದ ಹೊತ್ತಿಗೆಯನ್ನು ಬರೆದಿದ್ದಾರೆ. ಇಷ್ಟು ದೊಡ್ಡ ಪುಸ್ತಕವನ್ನು ಒಮ್ಮೆಲೆ ಮಿಂಚಿನಬಳ್ಳಿಯಲ್ಲಿ ಕೊಡಲು ಶಕ್ಯವಿಲ್ಲದ್ದರಿಂದ ಎರಡು ಭಾಗಗಳಾಗಿ ಕೊಡುವದನ್ನು ನಿಶ್ಚಯಿಸಿದ್ದೇನೆ. ಇದೇ ಮೊದಲನೆಯ ಭಾಗವು.

ಭಾಷೆಯಲ್ಲಿದ್ದ ಚಿಕ್ಕಪುಟ್ಟ ದೋಷಗಳನ್ನು ತಿದ್ದಿ ಮುದ್ರಣಕ್ಕೆ ಯೋಗ್ಯವಾಗುವಂತೆ ಮಾಡಿಕೊಟ್ಟ ಶ್ರೀ. ಚುಳಕಿ ಗೋವಿಂದರಾಯರಿಗೆ ಧನ್ಯವಾದಗಳನ್ನು ಅರ್ಪಿಸುವದು ನನ್ನ ಕರ್ತವ್ಯವು. ಜಯಕರ್ನಾಟಕ ಕಾರ್ಯಾಲಯದವರೂ, पाटणाद नवशक्तिप्रकाशन मंदिरदवरु ನಮ್ಮ ಬಿನ್ನಹಕ್ಕೆ ಮನ್ನಣೆ ಕೊಟ್ಟು ಪಡಿಯಚ್ಚುಗಳನ್ನು ಒದಗಿಸಿ ಸಹಾಯ ಮಾಡಿದ್ದಕ್ಕಾಗಿ, ನಾನು ತುಂಬಾ ಋಣಿಯಾಗಿದ್ದೇನೆ.

ತಮ್ಮ ಅಡಿಯಾಳು,

೧೫-೭-೩೯
ಧಾರವಾಡ.

**ಬುರ್ಲಿ ಬಿಂದುಮಾಧವ.**

# ಪ ರಿ ವಿ ಡಿ

## ಮೊದಲನೆಯ ಪ್ರಕರಣ



## ಎರಡನೆಯ ಪ್ರಕರಣ



## ಮೂರನೆಯ ಪ್ರಕರಣ



---



ಒರಹಗಾರರಾದ

ಶ್ರೀ. ಎಲ್. ನಂಜಪ್ಪನವರು

ವಾಣಿಜ್ಯ ವಿಶ್ವವಿದ್ಯಾಲಯ

ಟೋಕಿಯೋ.

# ಮುಂದುವರಿದ ಜಪಾನು

---

ಯಾವದೇ ಒಂದು ದೇಶದ ಪ್ರಗತಿಯನ್ನು ತಿಳಿದುಕೊಳ್ಳಬೇಕಾದರೆ ಆ ದೇಶದ ಭೂಗೋಲ, ಚರಿತ್ರ, ಜನಾಂಗದ ಮೂಲ ಮತ್ತು ನಾಗರಿಕತೆಯ ಅಭ್ಯಾಸ ಮಾಡಬೇಕಾಗುವದು. ಆದುದರಿಂದ ಜಪಾನಿನ ವಿಷಯವನ್ನು ಅದೇ ರೀತಿಯಾಗಿ ಮುಂದುವರಿಸಿದೆ.

## ೧. ಭೂಗೋಲ

ಜಪಾನ್ ಸಾಮ್ರಾಜ್ಯವು ಶಾಂತಿಸಾಗರದ ಉತ್ತರ ಭಾಗದಲ್ಲಿದೆ. ೧೮೬೮ನೆಯ ಇಸವಿಯಲ್ಲಿ ಹಿಂದಿನ ಚಕ್ರವರ್ತಿಗಳ ಆಡಳಿತದ ಪುನರ್ವ್ಯವಸ್ಥೆಯಲ್ಲಿ ( Restoration ) ಜಪಾನು ರಾಜ್ಯವು ಕೇವಲ ನಾಲ್ಕು ದೊಡ್ಡ ದ್ವೀಪಗಳಿಂದಲೂ ೪೦೬೮ ಸಣ್ಣಪುಟ್ಟ ದ್ವೀಪಗಳಿಂದಲೂ ಕೂಡಿದುದಾಗಿತ್ತು. ಅಲ್ಲಿಂದೀಚೆಗಾದ ಬೆಳವಣಿಗೆಯಿಂದ ಅದಿಂದು ವಿಸ್ತಾರವಾದ ಸಾಮ್ರಾಜ್ಯಗಳಲ್ಲೊಂದಾಗಿದೆ. ಜಪಾನು ಏಸ್ಯಾಖಂಡದ ಮುಖ್ಯಭೂಮಿಯಿಂದ ( Main land ) ೧೦೦ ಮೈಲು ದೂರವಿದೆ. ಅಲ್ಲಿಯ ಪ್ರಾಣಿಗಳ ಮತ್ತು ವನಸ್ಪತಿ ವರ್ಗಗಳ ಶೋಧನೆ ನಡೆಯಿಸಿದ ಶಾಸ್ತ್ರಜ್ಞರು ಜಪಾನು ಮೊದಲು ಮುಖ್ಯಭೂಮಿಗೆ ಹೊಂದಿಕೊಂಡಿದ್ದಿತೆಂದೂ ಇತ್ತೀಚೆಗೆ ಬೇರ್ಪಟ್ಟಿದೆಯೆಂದೂ ಅಭಿಪ್ರಾಯಪಟ್ಟಿರುವರು.

ಹೀಗೆ ಬೇರ್ಪಟ್ಟುದು ಆ ದೇಶದ ಸುಯೋಗವೆಂದೇ ಜನರಿಂದಿಗೂ ಭಾವಿಸುತ್ತಿದ್ದಾರೆ. ಚೀನೀಯರಿಗೆ ಆಗಾಗ್ಗೆ ಒದಗುತ್ತಿದ್ದ ಮಧ್ಯಏಷ್ಯದ ಕಾಡುಜನಗಳ ಬಾಧೆ, ಈ ಜಪಾನೀಯರಿಗೆ ತಪ್ಪಿದುದರಿಂದ ಶಾಂತತೆಯಿಂದ ರಾಜ್ಯಭಾರವನ್ನು ಮಾಡಿಕೊಂಡು ಕಲೆ, ನಾಗರಿಕತೆಗಳನ್ನು ಭದ್ರವಾದ ತಳಹದಿಯ ಮೇಲೆ ಕಟ್ಟಲು ಅವರಿಂದಾಯಿತು. ಅಂದು ಭದ್ರವಾಗಿ ಕಟ್ಟಿದ ಕಲೆ, ನಾಗರಿಕತೆಗಳೇ ಆ ದೇಶದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬರುತ್ತಿರುವವು.

**ವಸಾಹತುಗಳು (Colonies)**

೧೮೯೫ರಲ್ಲಿ ನಡೆದ ಚೀನ-ಜಪಾನ್ ಮೊದಲನೆಯ ಯುದ್ಧದಲ್ಲಿ ಹಾಂಗ್‌ಕಾಂಗಿನ ಹತ್ತಿರದ ಫರ್ಮೋಜ್ ಎಂಬ ಚೀನೀಯರ ದೊಡ್ಡ ದ್ವೀಪವು ಜಪಾನೀಯರಿಗೆ ವಶವಾಯಿತು. ಮತ್ತು ೧೯೦೪-೫ರ ರಷ್ಯಾ-ಜಪಾನ್ ಕಾಳಗದಲ್ಲಿ ಕೋರಿಯಾ, ಸಾಂಗರಿಯನ್ನಿನ ಅರ್ಧಭಾಗಗಳು ಜಪಾನೀಯರ ಕೈಸೇರಿದುವು; ಅಲ್ಲದೆ ದಕ್ಷಿಣ ಮಂಚೂರಿಯದಲ್ಲಿ ರೈಲ್ವೆಯನ್ನು ಸ್ಥಾಪಿಸುವ ಹಕ್ಕನ್ನೂ ಅವರು ಪಡೆದರು. ಕಳೆದ ಮಹಾಯುದ್ಧದಲ್ಲಿ ಇಂಗ್ಲಿಷರ ಪಕ್ಷವನ್ನು ವಹಿಸಿ, ಏಷ್ಯಖಂಡದಲ್ಲಿ ಜರ್ಮನಿಯೊಡನೆ ಹೋರಾಡಿದುದರಲ್ಲಿ, ಶಾಂತಿಸಾಗರದಲ್ಲಿದ್ದ ಜರ್ಮನಿಯವರ ದಕ್ಷಿಣ ದ್ವೀಪಗಳು ಜಪಾನೀಯರಿಗೆ ವರ್ಸೆಲೀಸ ಒಪ್ಪಂದದಂತೆ ದೊರೆತವು. ಇದರೊಂದಿಗೆ ಇವರ ನೇತೃತ್ವದಲ್ಲಿ ಸ್ಥಾಪಿಸಲ್ಪಟ್ಟ ಮಂಚೂರಿಯ ಸಾಮ್ರಾಜ್ಯದಲ್ಲಿ ಆರ್ಥಿಕ ಮೊದಲಾದ ಅನುಕೂಲತೆಗಳು ಇವರಿಗುಂಟಾದುವು. ಅಂತೂ ಇಂದು ಜಪಾನೀಯರ ಸಾಮ್ರಾಜ್ಯವು ಶಾಂತಿಸಾಗರದ ಉತ್ತರದ ೨೧° ಡಿಗ್ರಿಯಿಂದ ೫೦° ಡಿಗ್ರಿಯ ವರೆಗೆ ಅರ್ಧಚಂದ್ರಾಕಾರವಾಗಿ ೩,೩೮೦ ಚದರ ಮೈಲುಗಳ ಪ್ರದೇಶವನ್ನು ಒಳಕೊಂಡಿದೆ. ಇಡಿ ಜಪಾನ್ ಚಕ್ರಾಧಿಪತ್ಯದ ವಿಸ್ತಾರವು ೨,೬೫,೧೨೯ ಚದರು ಮೈಲುಗಳಷ್ಟಿದೆ. ಇದರಲ್ಲಿ ಜಪಾನು ಮಾತ್ರ ನೂರಕ್ಕೆ ೫೭೩ ಭಾಗವನ್ನು ಆಕ್ರಮಿಸಿರುವುದು; ಮತ್ತು ಸಾಮ್ರಾಜ್ಯದ ಜನಸಂಖ್ಯೆಯ ನೂರಕ್ಕೆ ೭೦ರಷ್ಟು ಭಾಗವನ್ನು ಒಳಕೊಂಡಿದೆ.

ಜಪಾನು ವಿವಿಧ ವಾಯುಗುಣಗಳ ನೆಲೆವೀಡಾಗಿದೆ. ಇದರ ಶೀತೋಷ್ಣ ಪ್ರಮಾಣವು ಕ್ಷಣಕ್ಷಣಕ್ಕೂ ಬದಲಾಗುತ್ತ, ಯಾವಾಗಲೂ ಜನರನ್ನು ಅಶಾಂತ ಸ್ಥಿತಿಯಲ್ಲಿಟ್ಟಿರುವುದು. ಈ

**ಹವಾಮಾನ**

ದೇಶದ ಉತ್ತರ ಭಾಗದಲ್ಲಿ ವರ್ಷದಲ್ಲಿ ಸರಾಸರಿ ಉಷ್ಣತಾಪಮಾನವು ೩೨°(Fahrenheit) ರಿಂದ ದಕ್ಷಿಣ ಭಾಗದಲ್ಲಿ ೭೫° ವರೆಗೆ ಇರುತ್ತದೆ. ಇಲ್ಲಿಯ ಹವಾಮಾನವು ಮಳೆ–ಗಾಳಿ (Mansoons) ಯನ್ನೂ ಭೂಖಂಡದಿಂದ ಬೀಸುವ ಶೀತೋಷ್ಣವಾಯುಗಳನ್ನೂ ಅವಲಂಬಿಸಿದೆ. ಜನವರಿ ಫೆಬ್ರುವರಿಗಳಲ್ಲಿ ಭೂಖಂಡದಿಂದ ಬರುವ ಚಳಿಗಾಳಿಯಿಂದ ಇಲ್ಲಿಯ ಉಷ್ಣತೆಯು ಶೂನ್ಯ ಅಂಶಕ್ಕಿಂತಲೂ ( Below Zero ) ಕಡಿಮೆಯಾಗುವುದು. ಮೂರು ನಾಲ್ಕು ತಿಂಗಳು ಎರಡು ಮೂರು ಅಡಿಗಳಷ್ಟು ಮಂಜುಬಿದ್ದು ಜನರಿಗೆ ತುಂಬಾ ತೊಂದರೆಯಾಗುತ್ತದೆ. ಪೌರಸಭೆಗಳು ನಗರಗಳಲ್ಲಿಯ ಮಂಜನ್ನು ಗುಡಿಸಲು ಲಕ್ಷಾಂತರ ರೂಪಾಯಿಗಳನ್ನು ವ್ಯಯಸುತ್ತವೆ. ಆಗ ಪ್ರತಿಗೃಹದಲ್ಲಿಯೂ ೨೪ ಗಂಟೆಗಳ ಕಾಲ ಅಗ್ಗಿಷ್ಟಿಗೆ ಉರಿಯುತ್ತಿರುತ್ತದೆ. ಶಾಲೆ–ಕಾಲೇಜು–ಕಚೇರಿ ಮೊದಲಾದವುಗಳಲ್ಲಿ ಕೆಲಸಕ್ಕೆ ತೊಡಗುವ ಮುಂಚೆ ಕೋಣೆಗಳಲ್ಲಿ ಉಗಿಯಿಂದ ಉಷ್ಣತೆಯನ್ನು ಹುಟ್ಟಿಸುತ್ತಾರೆ. ಜನರು ಉಣ್ಣೆಯ ಬಟ್ಟೆಗಳನ್ನು ಧರಿಸುತ್ತಾರೆ. ಕೈಗೆ ಚರ್ಮದ ಚೀಲಗಳನ್ನು ಹಾಕಿಕೊಳ್ಳದೆ ಹೊರಬೀಳುವುದೇ ಇಲ್ಲ. ಇದರಂತೆ ಜಪಾನಿನ ಬೇಸಗೆಯೂ ಶಾಂತಿಸಾಗರದ ಕಡೆಯಿಂದ ಬೀಸುವ ಬಿಸಿ ಗಾಳಿಯಿಂದ ಕಡುತರವಾಗುವದು. ಸಮುದ್ರವು ಸುತ್ತಲೂ ವ್ಯಾಪಿಸಿದ್ದರೂ ಬೇಸಗೆಯಲ್ಲಿ ನೀರಿನ ಉಗಿಯು ಹವೆಯಲ್ಲಿ ಸೇರಿ ತಂಪನ್ನುಂಟುಮಾಡುವುದರ ಬದಲು ಅಸಹ್ಯವಾದ ಸೆಕೆಯನ್ನುಂಟು ಮಾಡುವುದು. ಸೆಕೆಯನ್ನು ತಡೆಯಲಾರದ, ಅನುಕೂಲವುಳ್ಳ ಪಟ್ಟಣಿಗರು ಗಿರಿಪ್ರದೇಶಗಳಲ್ಲಿ ಬೇಸಗೆಯನ್ನು ಕಳೆಯುವುದುಂಟು. ಈ ಕಾಲದಲ್ಲಿ ಮಾತ್ರ ಜನರು ಹತ್ತಿಬಟ್ಟೆಗಳನ್ನು ಧರಿಸುವರು.

ಸದ್ಯಕ್ಕೆ ಜಗತ್ತಿನಲ್ಲಿ ಇರುವ ೨೪೦ ಬಗೆಯ ಸಸ್ತನಪ್ರಾಣಿಗಳಲ್ಲಿ

೧೮೦ ಬಗೆಯವು ಜಪಾನಿನಲ್ಲಿ ದೊರೆಯುತ್ತವೆ. ಅಲ್ಲದೆ ಇದೇ ತೆರದ ಪ್ರಾಣಿಗಳು ಪ್ರಪಂಚದಲ್ಲಿ ಮತ್ತೆಲ್ಲಿಯೂ ದೊರೆಯುವುದಿಲ್ಲ. ೭೬೦ ವನಸ್ಪತಿ - ವರ್ಗಗಳಲ್ಲಿ ನಾಲ್ಕರಲ್ಲೊಂದು ಪಾಲಿನಷ್ಟು ಈ ದೇಶದಲ್ಲಿವೆ. ೧೬೩೦ ಜಾತಿಗಳ ಮೀನುಗಳೂ ೪೦೦೦೦ ಜಾತಿಯ ಕ್ರಿಮಿಕೀಟಗಳೂ ಇಲ್ಲಿ ನೆಲೆಯಾಗಿವೆ.

ಪ್ರಾಣಿವರ್ಗ, ವನಸ್ಪತಿವರ್ಗ ಮತ್ತು ಆಹಾರ ಸಂಚಯ.

ಜಪಾನಿನ ವಿವಿಧ ಮೂಲ ಜನಾಂಗಗಳು ತಮ್ಮ ಅನುಕೂಲತೆಗಾಗಿ ತಂದಿದ್ದ ಮನೆವಾರಿನ ಪ್ರಾಣಿಗಳು, ಇಲ್ಲಿಯ ವಿಪರೀತ ವಾಯುಗುಣದ ಮೂಲಕ ಕೆಲದಿನಗಳಲ್ಲಿಯೆ ಮಾಯವಾದುವು. ರೇಶ್ಮೆ ಹುಳುವೊಂದು ಮಾತ್ರ ಅದೆಂತೋ ಜೀವಿಸಿಕೊಂಡಿದೆ. ಅಲ್ಲದೆ ಇಂದಿಗೂ ಅದು ಜಪಾನಿನ ಆರ್ಥಿಕ ಸ್ಥಿತಿಯ ಬೆನ್ನುಮೂಳೆಯಾಗಿ ಕೆಲಸ ಮಾಡುತ್ತಿರುವುದು. ನಾಕಾದಷ್ಟು ಬಯಲಿಲ್ಲದುದರಿಂದ ಕುದುರೆ ಸಾಗುವಳಿಯೂ ಬೆಟ್ಟದ ತಪ್ಪಲುಗಳಲ್ಲಿ ಬಿದಿರು ವಿಪುಲವಾಗಿರುವುದರಿಂದ ದನಕರುಗಳ ಸಾಗುವಳಿಯೂ ಹಿಂದೆ ಬಿದ್ದಿರುವುವು. ಈಚೆಗೆ ಸರಕಾರದವರು ಯುದ್ಧಕ್ಕೆಂದು ಕುದುರೆ ಸಾಗುವಳಿಗೆ ಹೆಚ್ಚು ಪ್ರೋತ್ಸಾಹನಕೊಡುತ್ತಿದ್ದರೂ ಅವುಗಳ ಒಟ್ಟು ಸಂಖ್ಯೆ ಹದಿನೈದು ಲಕ್ಷವನ್ನು ಮೀರಿಲ್ಲ.

ಜಪಾನಿನ ಧಾನ್ಯಾಹಾರಗಳಲ್ಲಿ ಬತ್ತ, ಜಾರಲಿ, ನವಣೆ, ಮತ್ತು ಗೋದಿಗಳು ಮುಖ್ಯವಾಗಿವೆ. ಇವುಗಳ ಜೊತೆಗೆ ಆಲುಗಡ್ಡೆ, ಈರುಳ್ಳಿ ಮತ್ತು ಮೀನುಗಳು ಆಹಾರದ ಮುಖ್ಯಾಂಶಗಳಾಗಿವೆ. ಇಲ್ಲಿಯವರು ಮಾಂಸವನ್ನು ಹೆಚ್ಚಾಗಿ ತಿನ್ನುವುದಿಲ್ಲ. ೧೮೭೮ ರ ವರೆಗೂ ಬೌದ್ಧ ಧರ್ಮದ ಅಹಿಂಸಾ ತತ್ತ್ವದ ಮೇರೆಗೆ ಮಾಂಸವನ್ನು ವರ್ಜಿಸಿದ್ದರು. ಇತ್ತೀಚೆಗೆ ಪಾಶ್ಚಾತ್ಯರ ಸಂಸರ್ಗವುಂಟಾದ ಬಳಿಕ ಈ ರೂಢಿ ಸಡಿಲಾಗಿರುವುದು. ಸದ್ಯದ ಜಪಾನೀಯ ಬೌದ್ಧರಲ್ಲಿಯೂ ಮಾಂಸಾಹಾರವು ರೂಢವಾಗುತ್ತಿದೆ. ಕೆಲವು ಸಾಂಪ್ರದಾಯವಾದಿಗಳೂ ಒಟ್ಟಿಗಳೂ ಈಗಲೂ ಮಾಂಸವನ್ನು ಸೇವಿಸುವುದಿಲ್ಲ. ಹಳ್ಳಿಗಳಲ್ಲಿ ಮಾಂಸದ ಪೂರೈಕೆ ಇಲ್ಲದೆ ಇರುವುದರಿಂದ ಅಲ್ಲಿಯ ಜನರು ಮಾತ್ರ ಸಸ್ಯಾಹಾರಿಗಳಾಗಿಯೆ ಉಳಿದಿದ್ದಾರೆ.

ಜಪಾನೀಯರು ಮೀನಿನ ಉಪಾಸಕರು. ಸಮುದ್ರವು ಈ ದೇಶವನ್ನು ಬಳಸಿ ಅಪ್ಪಿಕೊಂಡಿರುವುದರಿಂದ ಅವು ಅವರಿಗೆ ಯಥೇಚ್ಛವಾಗಿ ದೊರಕುವವು. ಇಡೀ ಪ್ರಪಂಚದಲ್ಲಿ ವರ್ಷಕ್ಕೆ ಒಂದು ಕೋಟಿ ಟನ್ ಮೀನುಗಳು ಹಿಡಿಯಲ್ಪಡುತ್ತವೆ; ಅವುಗಳ ಬೆಲೆ ೨೫೦ ಕೋಟಿ ರೂಪಾಯಿಗಳಾಗುತ್ತದೆ. ಅವುಗಳಲ್ಲಿ ಜಪಾನೊಂದರಲ್ಲಿಯೇ ೫೨ ಕೋಟಿ ರೂಪಾಯಿ ಬೆಲೆಯ ಮೂವತ್ತು ಲಕ್ಷ ಟನ್ನು ಮೀನುಗಳು ಹಿಡಿಯಲ್ಪಡುವವು. ಇಲ್ಲಿ ೧೫ ಲಕ್ಷ ಬೆಸ್ತರು ಮೀನು ಹಿಡಿದು ರಫ್ತು ಮಾಡುವ ಕಸಬಿನಲ್ಲಿ ತೊಡಗಿರುವರು. ಜಪಾನಿನ ಸಮುದ್ರದಲ್ಲಿ ವಿಶೇಷವಾಗಿ ಸಿಗುವ ಸೊಪ್ಪಿನಲ್ಲಿ (Sea-weeds) ನೂರಕ್ಕೆ ೬೦ ರಷ್ಟು ಭಾಗವನ್ನು ಆಹಾರಕ್ಕೂ ಉಳಿದುದನ್ನು ಗೊಬ್ಬರಕ್ಕೂ ಉಪಯೋಗಿಸುವರು. ಇಲ್ಲಿಯ ಜನರು ವರುಷದಲ್ಲಿ ೨೦೦ ಪೌಂಡ ಮೀನುಗಳನ್ನು ತಿನ್ನುತ್ತಾರೆ. ಇಷ್ಟು ಮೀನುಗಳನ್ನು ಬಹುಶಃ ಯಾವ ದೇಶದವರೂ ತಿನ್ನುವುದಿಲ್ಲ. ಸ್ವೀಡನ್ನದಲ್ಲಿ ೫೨ ಪೌಂಡು, ನಾರ್ವೆದಲ್ಲಿ ೪೪ ಪೌಂಡು, ಕಾನಡಾದಲ್ಲಿ ೩೦ ಪೌಂಡು, ಅಮೇರಿಕೆಯಲ್ಲಿ ೧೬ ಪೌಂಡು ಮೀನುಗಳನ್ನು ತಿನ್ನುವರು. ಜಪಾನೀಯರ ಮೆದುಳು ದೊಡ್ಡದಾಗಿ ಬೆಳೆಯುವುದಕ್ಕೆ ಹೆಚ್ಚಾಗಿ ಮೀನುಗಳನ್ನು ತಿನ್ನುವುದೇ ಕಾರಣವೆಂದು ಅನೇಕ ಪಾಶ್ಚಾತ್ಯ ಗ್ರಂಥಕರ್ತರ ಅಭಿಪ್ರಾಯವಾಗಿದೆ. ಅದರಂತೆಯೇ ಮಾಂಸಾಹಾರಿ ಜನಾಂಗಕ್ಕಿಂತ ಮೀನಾಹಾರಿ ಜನಾಂಗದ ಸಂತಾನಾಭಿವೃದ್ಧಿಯು ವಿಶೇಷವಾಗುವುದೆಂದೂ ಎನ್ನುವರು. ಸದ್ಯಕ್ಕೆ ಈ ವಿಷಯದ ಬಗ್ಗೆ ಶಾಸ್ತ್ರೀಯ ಶಂಶೋಧನೆಯಾಗಬೇಕಾಗಿದೆ.

ಜಪಾನಿನಲ್ಲಿ ೧೦೦ ಕ್ಕೆ ೪೮ ಜನರು ವ್ಯವಸಾಯ ಜೀವಿಗಳು. ಬತ್ತದ ಸಾಗುವಳಿಯೇ ಹೆಚ್ಚು. ದೇಶದ ಎಲ್ಲ ಭಾಗಗಳಲ್ಲಿಯೂ ನೀರಿನ ಸೌಕರ್ಯವಿದೆ. ಆದುದರಿಂದ ಅಲ್ಲಿಯ ಜನರು ವರುಷಕ್ಕೆ ಎರಡು ಬೆಳೆಗಳನ್ನು ತೆಗೆಯುತ್ತಾರೆ. ಆದರೆ ಸಾಗು ಭೂಮಿಯು ಮಾತ್ರ ಅತ್ಯಲ್ಪವಾಗಿದೆ. ಪ್ರತಿ ಕುಟುಂಬಕ್ಕೆ ೨½ ಎಕರೆಯಷ್ಟು ಮಾತ್ರ ಸಾಗುಭೂಮಿ ಸಿಗುವುದು. ಈ ಚಿಕ್ಕ ಕ್ಷೇತ್ರದಲ್ಲಿ ಜಪಾನೀಯರು

ಮಾಡುವ ಕೆಲಸವನ್ನು ನೋಡಿದರೆ ನಮ್ಮ ಭಾರತೀಯರು ತೋಟಗಳಲ್ಲಿ ಪಡುವ ಕಷ್ಟಗಳ ನೆನಪಾಗುವದು. ಅಂತೆಯೆ ಇಲ್ಲಿಯ ಸಾಗುಭೂಮಿ ಯನ್ನು ಪಾಶ್ಚಾತ್ಯರು ತೋಟವೆಂದು ಕರೆದಿರುವರು. ಹೊಲದ ಕಷ್ಟ ವನ್ನು ಹೆಚ್ಚಾಗಿ ಸ್ತ್ರೀಯರೇ ಮಾಡುವರು. ಗಂಡಸರು ತಮ್ಮ ಹಳ್ಳಿಯ ಹತ್ತಿರದ ಕಾರ್ಖಾನೆಗಳಿಗೆ ಕೆಲಸಕ್ಕೆ ಹೋಗುತ್ತಾರೆ. ಪರಕೀಯರಾರಾ ದರೂ ಜಪಾನಿನ ಹಳ್ಳಿಗೆ ಹೋದರೆ ಅಲ್ಲಿ ತರುಣ ತರುಣಿಯರು ಅವರ ಕಣ್ಣಿಗೆ ಬೀಳುವುದಿಲ್ಲ. ಹೀಗೆಂದ ಮಾತ್ರಕ್ಕೆ ಹಳ್ಳಿಗಳಲ್ಲಿ ತರುಣ ತರುಣಿ ಯರೇ ಇಲ್ಲವೆಂದರ್ಥವಲ್ಲ; ಅಥವಾ ಅವರು ಮನೆಯಿಂದ ಹೊರಬರುವುದೇ ಇಲ್ಲವೆಂತಲ್ಲ. ಅವರೆಲ್ಲರು ಪಟ್ಟಣಗಳಲ್ಲಿದ್ದು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವರು. ವ್ಯವಸಾಯವನ್ನೆಲ್ಲ ಹಿರಿಯರಿಗೆ ಒಪ್ಪಿಸಿಕೊಟ್ಟಿರು ವರು; ಮತ್ತು ತಾವವರಿಗೆ ಧನಸಹಾಯ ಮಾಡುತ್ತಿರುವರು. ಇಲ್ಲಿಯ ಹಳ್ಳಿಗಳಲ್ಲಿ ಮನೆಗಳು ಒತ್ತಟ್ಟಿಗಿರುವುದಿಲ್ಲ. ಅವರವರ ಗದ್ದೆಗಳ ನಡು ನಡುವೆ ಬಿಡಿಬಿಡಿಯಾಗಿರುವವು. ಆದುದರಿಂದ ಸಾವಿರ ಜನಸಂಖ್ಯೆಯ ಹಳ್ಳಿ ಎಂದರೆ ನಾಲ್ಕೈದು ಮೈಲುಗಳ ಸುತ್ತಳತೆಯುಳ್ಳದಾಗಿರುತ್ತದೆ.

ಜಪಾನಿನಲ್ಲಿ ಬಯಲು ಕನಸಿನ ಮಾತೇ ಆಗಿರುವುದು. ಆದುದ ರಿಂದ ಕುರಿಯ ವ್ಯವಸಾಯಕ್ಕೆ ಆಸ್ಪದವೇ ಇಲ್ಲ. ಉಣ್ಣೆಯ ಉದ್ಯೋಗ ಕ್ಕಾಗಿ ಸರಕಾರವು ಹೆಚ್ಚಾಗಿ ಪ್ರೋತ್ಸಾಹನವನ್ನೀಯುತ್ತಿದ್ದರೂ ಪ್ರಯೋಜನವಿಲ್ಲದಾಗಿದೆ. ಇತ್ತೀಚೆಗೆ ಕೋರಿಯಾ, ಮಂಚೂರಿಯಾ ದೇಶಗಳಲ್ಲಿ ಸರಕಾರದವರು ಕುರಿಯ ಸಾಕುವಳಿಯನ್ನು ದೊಡ್ಡ ಪ್ರಮಾಣದಲ್ಲಿ ಪ್ರಾರಂಭಿಸಿರುವರು. ದೇಶಕ್ಕೆ ಅಗತ್ಯವಿರುವ ಉಣ್ಣೆಯು ಕೋರಿಯಾ ಮಂಚೂರಿಯಗಳಿಂದ ಬರಬೇಕಾದರೆ ಇನ್ನೂ ಹತ್ತಾರು ವರ್ಷಗಳು ಹಿಡಿಯುವುವು. ಜಪಾನಿಗೆ ಹತ್ತಿರವಿರುವ ಆಸ್ಟ್ರೇಲಿಯದಲ್ಲಿ ಉಣ್ಣೆ ಅಗ್ಗವಾಗಿ ಸಿಕ್ಕುತ್ತದೆ. ಆದರೂ ಅದನ್ನು ಬಿಟ್ಟು ಹೆಚ್ಚು ಹಣ ವನ್ನು ವೆಚ್ಚಮಾಡಿ ಆ ದೇಶಗಳಿಂದಲೇ ತರಿಸಬೇಕೇತಕ್ಕೆ? ದೇಶಪ್ರೇಮ ವಲ್ಲದೆ ಅನ್ಯಥಾ ಅಲ್ಲ.

ಜಪಾನು ಬೆಟ್ಟಗಳ ನಾಡು. ಇಲ್ಲಿಯ ಬೆಟ್ಟಗಳೆಲ್ಲವು ಅಗ್ನಿಪರ್ವತ

ದಿಂದ ಉಂಟಾದುವು. ಈ ದೇಶವು 'ಭೂಕಂಪಕ್ಕೆ, (Earthquakes) ತವರುಮನೆಯಾಗಿರುವಂತೆ ಅಗ್ನಿಪರ್ವತದ ಅತ್ತೆಮನೆಯಾಗಿದೆ. ಒಟ್ಟು ಇಲ್ಲಿ ಶಾಂತವಾದ ೧೬೫ ಅಗ್ನಿಪರ್ವತಗಳೂ ಜ್ವಲಿಸುವ (Active) ೫೪ ಅಗ್ನಿಪರ್ವತಗಳೂ ಉಂಟು. ಈ ಅಗ್ನಿಪರ್ವತಗಳ ಮೂಲಕ ಅನೇಕ ಖನಿಜಗಳು ದೊರೆಯುತ್ತಿವೆ. ವರ್ಷಕ್ಕೆ ಮೂರುಕೋಟ ಮೇಟರಿಕ್ ಟನ್‌ಗಳು ಹದಿನೈದು ಕೋಟಿ ರೂಪಾಯಿ ಬೆಲೆ ಬಾಳುವ ಕಲ್ಲಿದ್ದಲು ಭೂಗರ್ಭದಿಂದ ದೊರೆಯುತ್ತದೆ. ಇವರ ಮುಂದುವರಿದ ಕೈಗಾರಿಕೆಗಾಗಿ ಲಕ್ಷಾಂತರ ಟನ್ ಕಲ್ಲಿದ್ದಲನ್ನು ಪರದೇಶಗಳಿಂದ ತರಿಸಬೇಕಾಗುತ್ತದೆ. ಜಪಾನಿನಲ್ಲಿ ತಾಮ್ರವು ಹೇರಳವಾಗಿ ದೊರೆಯುವುದು. ತಾಮ್ರೋತ್ಪತ್ತಿ ಯಲ್ಲಿ ಜಪಾನು ಪ್ರಪಂಚದಲ್ಲಿ ಮೂರನೆಯ ಸ್ಥಾನವನ್ನು ಪಡೆದಿರು ವುದು. ಚಿನ್ನ ಬೆಳ್ಳಿಗಳು ಕ್ಲುಪ್ತಪ್ರಮಾಣದಲ್ಲಿ ಸಿಕ್ಕುತ್ತವೆ. ಕಬ್ಬಿಣದ ಅದಿರು, ಸೀಸ, ಅಂಟಿಮೊನಿ, ಮ್ಯಾಂಗನೀಸ್‌ಗಳು ಅತಿ ವಿರಳವಾಗಿ ದೊರಕುವುವು. ಗಂಧಕವು ದೇಶದ ಎಲ್ಲಾ ಭಾಗಗಳಲ್ಲಿ ವಿಪುಲವಾಗಿ ಸಿಗುವುದು. ಗಂಧಕದ ಅನೇಕ ಕಣಿಗಳಿವೆ. ದೇಶವು ಅಗ್ನಿಪರ್ವತಮಯ ವಾಗಿರುವುದರಿಂದ ಉತ್ತಮತರದ ಬಂಡೆಗಳು ಲಭಿಸುವುದಿಲ್ಲ. ಕಲ್ಲಿನ ಕೆಲಸ ಮಾಡಿಸುವುದಕ್ಕೆ ಇಲ್ಲಿ ಹೆಚ್ಚು ಧನವ್ಯಯವಾಗುವುದು. ಭೂಕಂಪ ಬಾಧೆಯ ಮೂಲಕ, ಭದ್ರವಾದ ಕಲ್ಲಿನ ಕಟ್ಟಡಗಳನ್ನಾಗಲಿ, ಇನ್ನಾವ ತರದ ಕಟ್ಟಡಗಳನ್ನಾಗಲಿ ಅಥವಾ ಎಂಟು ಅಂತಸ್ತಿಗಿಂತ ಹೆಚ್ಚಿನ ಅಂತಸ್ತಿನ ಕಟ್ಟಡಗಳನ್ನಾಗಲಿ ಕಟ್ಟಕೂಡದೆಂದು ಕಾಯಿದೆಯುಂಟು. ಆದರಕಾರಣವೆ ಪ್ರಪಂಚದಲ್ಲಿ ಮೂರನೆಯ ಪಟ್ಟಣವಾದ ಟೋಕಿಯೊ ನಗರದಲ್ಲಿ ಎಂಟಂತಸ್ತಿಗೆ ಮಿರಿದ ಕಟ್ಟಡಗಳು ಕಣ್ಣಿಗೆ ಬೀಳದೆ ಇರು ವುದು. ಪೆಟ್ರೋಲಿಯಂ (Petroleum) ವರ್ಷಕ್ಕೆ ೨,೪೦,೦೦೦ ಟನ್‌ಗಳಷ್ಟು ಮಾತ್ರ ದೊರೆಯುತ್ತದೆ. ಪೆಟ್ರೋಲಿಯಂನಿಂದ ನಡೆಯುವ ಕಾರ್ಯಗಳು ಇಲ್ಲಿ ಬಹಳವಾಗಿರುವುದರಿಂದ, ದೊರೆಯುವ ಪೆಟ್ರೋಲಿಯಂ ಅಗತ್ಯದ ಗಿರ್ಧಭಾಗವನ್ನು ಮಾತ್ರ ಪೂರಯಿಸುವುದು. ಈ ಕೊರತೆ ಯನ್ನು ಆದಷ್ಟು ಸ್ವದೇಶೀಯ ಪೆಟ್ರೋಲಿಯಂನಿಂದಲೇ ತುಂಬಿಕೊಳ್ಳ

**ಖನಿಜಸಂಪತ್ತು**

ಬೇಕೆಂದು ಸರಕಾರವು ಕಲ್ಲಿದ್ದಲಿನಿಂದ ಪೆಟ್ರೋಲಿಯಂ ತೆಗೆಯುವುದಕ್ಕೆ ಉತ್ತೇಜನ ಕೊಡುತ್ತಲಿದೆ. ಆದರೆ ಅದರಿಂದ ಉತ್ಪನ್ನವಾಗುವ ಎಣ್ಣೆಯು ಬೆಲೆ ಹೆಚ್ಚಾಗುವುದೋ ಕಡಿಮೆಯಾಗುವುದೋ ನೋಡಬೇಕಾಗಿದೆ.

ಜಪಾನಿನಲ್ಲಿ ನದಿಗಳು ಬೇಕಾದಷ್ಟು ಕಡೆ ಧುಮುಕುತ್ತಿರುವುದರಿಂದ ವಿದ್ಯುಚ್ಛಕ್ತಿಗೆ ಸಾಕಾದಷ್ಟು ಅನುಕೂಲತೆಗಳಿವೆ. ಇಂದು ಈ ದೇಶದ ಕೈಗಾರಿಕೆಯು ವಿದ್ಯುಚ್ಛಕ್ತಿಯಿಂದಲೆ ನಡೆಯುತ್ತಿದೆ. ೧ ಕೋಟಿ ೨೦ ಲಕ್ಷ ಅಶ್ವಶಕ್ತಿಯ ವಿದ್ಯುತ್ತನ್ನು ಹುಟ್ಟಿಸಬಹುದಾದರೂ ನಾಲ್ಕನೆಯ ಒಂದು ಭಾಗವು ಮಾತ್ರ ಕಾರ್ಯರೂಪಕ್ಕೆ ಬಂದಿರುವುದು. ಇಡೀ ಏಸ್ಯಖಂಡದಲ್ಲಿ ವಿದ್ಯುದುತ್ಪತ್ತಿಗೆ ಮೈಸೂರು ಸೀಮೆಯಲ್ಲಿಯೆ ಮೊದಲಾಯಿತು. ತರುವಾಯ ಅನೇಕ ವರ್ಷಗಳ ಮೇಲೆ ಜಪಾನೀಯರು ವಿದ್ಯುತ್ತನ್ನು ಹುಟ್ಟಿಸಿದರು. ಮತ್ತೆ ಇಷ್ಟರಲ್ಲಿಯೆ ತಮ್ಮ ದೇಶವನ್ನವರು ಕೈಗಾರಿಕೆಯ ದೇಶವನ್ನಾಗಿ ಮಾಡಿದ್ದಾರೆ. ಜಪಾನಿನಲ್ಲಿಂದು ವಿದ್ಯುಚ್ಛಕ್ತಿ ಪ್ರವೇಶಿಸದ ಮನೆಯಿಲ್ಲ. ಆದೇ ಮೈಸೂರಿನಲ್ಲಿ ?

ಜಪಾನೀಯರು ಮರವನ್ನು ಪಾಶ್ಚಾತ್ಯರಿಗಿಂತ ಹೆಚ್ಚಾಗಿ ನಾನಾ ವಿಧವಾಗಿ ಉಪಯೋಗಿಸಿಕೊಳ್ಳುವರು. ಕಲ್ಲಿದ್ದಲಿನ ಬದಲಾಗಿ ಕಟ್ಟಿಗೆಯನ್ನೆ ಸೌದೆಯಾಗಿ ಬಳಸುವರು. ಇಟ್ಟಿಗೆ ಕಲ್ಲುಗಳ ಬದಲು ಮರಗಳಿಂದಲೇ ಮನೆಕಟ್ಟುತ್ತಾರೆ. ಸರಾಸರಿ ವರ್ಷಕ್ಕೆ ೨೩ ಅಂಗುಲಗಳಿಂದ ೧೨೦ ಅಂಗುಲಗಳವರೆಗೆ ೧೬೦ ದಿನಗಳಲ್ಲಿ ಮಳೆಯಾಗುವದು. ಅದರಿಂದ ಇಲ್ಲಿ ದಟ್ಟವಾದ ಮರಗಳು ಬೆಳೆಯುತ್ತವೆ. ದೇಶದ ಅರ್ಧಭಾಗವು ಅಡವಿಯೇ ಆಗಿದೆ. ಎಂದರೆ ೫ ಕೋಟಿ ೬೦ ಲಕ್ಷ ಎಕರೆ ಭೂಮಿಯಲ್ಲಿ ಮರಗಳು ಬೆಳೆಯುತ್ತವೆ. ಒಟ್ಟು ೬೦೦ ಜಾತಿಯ ಮರಗಳುಂಟು. ಇವುಗಳಲ್ಲಿ ೧೦೦ ಮಾತ್ರ ಮನುಷ್ಯೋಪಯೋಗಿಗಳು. ಇವುಗಳಲ್ಲಿ ಬಿದರಿನ ಅಗ್ಗಳಿಕೆಯನ್ನಂತೂ ಹೇಳತೀರದು. ಅದರಿಂದ ೬೦೦ ತೆರದ ಪ್ರಯೋಜನಗಳನ್ನು ಜಪಾನೀಯರು ಹೊಂದುತ್ತಾರೆ.

**ಕಾಡುಗಳು ಮತ್ತು ನೀರಿನ ಸಮೃದ್ಧಿ**

ಪ್ರತಿಯೊಬ್ಬ ಪ್ರಜನು ವರುಷಕ್ಕೆ ೪೫ ರೂ. ಗಳ ಸೌದೆಯನ್ನು ಉರಿಸುತ್ತಾನೆ.

ಜಪಾನಿನ ಪ್ರಾಕೃತಿಕ ಭೂಪಟವನ್ನು ನೋಡಿದರೆ ಕೆಲವೆ ಸಮನಾದ ಬಯಲುಗಳನ್ನು ಕಾಣಬಹುದು. ಭೂಮಿಯು ಎಲ್ಲೆಲ್ಲಿಯೂ ಡೊಂಕುಡೊಂಕಾಗಿರುವುದು. ಮುಖ್ಯ ದ್ವೀಪದಲ್ಲಿ ದೊಡ್ಡ ನದಿಯಾದ 'ತೊನೆ'ಯು ೨೦೦ ಮೈಲು ಉದ್ದವಿದೆ. ಇದರ ಪಾತ್ರವಿಸ್ತಾರವು (drainage basin) ೬ ಸಾವಿರ ಚದರು ಮೈಲುಗಳಷ್ಟಿದೆ. ಇದರ ದಡದಲ್ಲಿ ಎಂಬತ್ತು ಪಟ್ಟಣಗಳಿವೆ. ಟೋಕಿಯೊ ಅವುಗಳಲ್ಲೊಂದು. ದೇಶದ ಜನಸಂಖ್ಯೆಯ ೧/೬ ಭಾಗವು ಈ ಪ್ರದೇಶದಲ್ಲಿ ವಾಸಿಸುತ್ತಿದೆ. ಯೋದೋ ನದಿಯು ದಕ್ಷಿಣ ಜಪಾನಿನಲ್ಲಿ ಹರಿಯುತ್ತಿದೆ. ಇದರ ಉದ್ದ ೧೫೦ ಮೈಲು. ಪ್ರಸಿದ್ಧವಾದ ಓಸಾಕಾ, ಕೋಬೆ ಮೊದಲಾದ ನಗರಗಳು ಇದರ ದಡದಲ್ಲಿವೆ. ಸರಕಾರವು ನದಿಗಳಿಗೆ ಬೇಕಾದಷ್ಟು ಕಾಲುವೆಗಳನ್ನು ಕಡಿಸಿ ಬೇಸಾಯಕ್ಕೆ ಹೆಚ್ಚು ಸಹಾಯ ಮಾಡಿರುವುದು. ವ್ಯವಸಾಯವು ಹಲವೆಡೆಗಳಲ್ಲಿ ವಿದ್ಯುಚ್ಛಕ್ತಿಯಿಂದ ನಡೆಸಲ್ಪಡುವುದು.

**ಭೂಕಂಪ**

ಭೂಕಂಪ ವಿಷಯದಲ್ಲಿ ಇಟಲಿ ಜಪಾನುಗಳು ಪ್ರಪಂಚಕ್ಕೇ ಪ್ರಸಿದ್ಧವಾದುವು. ಇತ್ತೀಚೆಯ ಪರಂಪರೆಯಲ್ಲಿ (Frequency) ಜಪಾನು ಇಟಲಿಯನ್ನು ಹಿಂದೆ ಹಾಕಿದೆ. ಬಿಹಾರದ ಭೂಕಂಪವನ್ನು ೧೯೨೩ರಲ್ಲಿ ಒದಗಿದ ಭೂಕಂಪದೊಡನೆ ಹೋಲಿಸಿದರೆ ಅಜಗಜಾಂತರವು ಕಂಡುಬರುವುದು. ಟೋಕಿಯೋ ಭೂಕಂಪದಲ್ಲಿ ನೆಲವು ೨೫೦೦ ಬಾರಿ ಬಲವಾಗಿಯೂ ೩೯೦೦ ಬಾರಿ ಸೂಕ್ಷ್ಮವಾಗಿಯೂ ನಡುಗಿತು; ಒಂದು ಲಕ್ಷ ಪ್ರಜೆಗಳು ಮಡಿದರು; ನಾಲ್ಕುನೂರು ಕೋಟಿ ರೂಪಾಯಿಗಳ ಆಸ್ತಿಪಾಸ್ತಿಗಳು ನಷ್ಟವಾದುವು. ಇದುವರೆಗೆ, ಟೋಕಿಯೋದಲ್ಲಿ ನಡೆದಂತಹ ಭೂಕಂಪವು ಪ್ರಪಂಚದಲ್ಲಿ ಮತ್ತೆಲ್ಲಿಯೂ ನಡೆದಿಲ್ಲ. ಜಪಾನಿನಲ್ಲಿ ವರ್ಷಕ್ಕೆ ೨೦೦೦ ಸಲ ಭೂಮಿಯು ನಡುಗುತ್ತದೆ. ಅನೇಕ ಬಾರಿ ಬಲವಾಗಿ ನಡುಗಿ, ಮನೆಯಲ್ಲಿರುವ ಗಡಿಯಾರವನ್ನು ಮುಂಕು

ಮಾಡಿ ನಿಲ್ಲಿಸುವುದುಂಟು; ಇವರ ಜತೆಗೆ ಅಲ್ಮ್ಯಾರಿಯಲ್ಲಿಟ್ಟಿದ್ದ ವಸ್ತುಗಳು ಉರುಳಿಬಿದ್ದು ಶಬ್ದವಾಗುವುದುಂಟು. ಇಲ್ಲಿಯ ಮನೆಗಳು ಹಗುರಾದ ಮರದ ಹಲಗೆಗಳಿಂದ ಪಂಜರದಂತೆ ಒಂದಕ್ಕೊಂದು ಸೇರಿಸಿ ಕಟ್ಟಿರುವುದರಿಂದ, ಭೂಕಂಪಗಳಿಂದ ಅವು ಉರುಳುವುದಿಲ್ಲ. ಭೂಮಿ ನಡುಗುವಾಗ ಮನೆಯೊಳಗಿದ್ದರೆ ತೊಟ್ಟಿಲಲ್ಲಿ ಉಯ್ಯಾಲಾಡುವಂತೆ ಭಾಸವಾಗುವುದು. ಹೊಸದಾಗಿ ಬಂದ ವಿದೇಶೀಯರು ನೆಲದ ಅದಿರಾಟದ ಭಯದಿಂದ ಕೆಲತಿಂಗಳು ನೆಮ್ಮದಿಯಾಗಿ ನಿದ್ರೆಯನ್ನೆ ಮಾಡುವುದಿಲ್ಲ. ಹಳಬರಾದಂತೆ ಬಲವಾಗಿ ಭೂಮಿ ಕಂಪಿಸಿದರೂ ಜಪಾನೀಯರಂತೆಯೆ ಮನೆಯಿಂದ ಕದಲುವುದಿಲ್ಲ. ಒಂದು ವೇಳೆ ಜಂತಣವು ಬಿದ್ದರೂ ಪ್ರಾಣಾಪಾಯವಿಲ್ಲ; ಹತ್ತಿಪ್ಪತ್ತು ದಿನ ಆರೈಕೆ ಹೊಂದಬೇಕಾಗುವುದಷ್ಟೆ. ಹೀಗಿದ್ದರೂ ಒಂದಿಲ್ಲೊಂದು ದಿನ ಭೂಮಿ ತನ್ನ ಲಕ್ಷಾಂತರ ಪ್ರಾಣಘಾತಕ ದರ್ಪವನ್ನು ಜಪಾನೀಯರ ಮೇಲೆ ತೋರದಿರುವುದೆ?

**ಭೂಗೋಲ ಮತ್ತು ಆಂತರ್ಯ ರಾಜಕೀಯ ಸ್ಥಿತಿ**

ಇಂದಿನ ಪ್ರಪಂಚದಲ್ಲಿ ಗಡಿನಾಡಿನ ಭದ್ರತೆಯನ್ನೇ ರಾಷ್ಟ್ರದ ಅಭಿವೃದ್ಧಿಯು ಅವಲಂಬಿಸಿದೆ. ಇಂದು ಪ್ರಕೃತಿಯು ಗಡಿಯನ್ನು ನಿರ್ಣಯಿಸಲು ಸಾಮರ್ಥ್ಯವನ್ನು ಕಳೆದುಕೊಂಡಿದೆ. ಎಂದಮೇಲೆ ಒಂದು ದೇಶದವರು ನೆರೆಹೊರೆಯವರನ್ನು ಸ್ನೇಹಿತರನ್ನಾಗಿ ಮಾಡಿಕೊಂಡು, ತಮ್ಮ ರಾಜ್ಯದ ಭದ್ರತೆಯನ್ನು ಕಾಪಾಡಿಕೊಳ್ಳಬೇಕು. ನೆರೆನಾಡವರು ಶತ್ರುಗಳಾದರೇ ಅವರನ್ನು ಜಯಿಸಿದಲ್ಲದೆ ದೇಶವು ಸುರಕ್ಷಿತವಾಗಿ ಉಳಿಯದು. ೧೯ನೆಯ ಶತಮಾನದ ವರೆಗೆ ಜಪಾನೀಯರು ನೆರೆಹೊರೆಯವರ ಹೆಚ್ಚು ಕಾಟವಿಲ್ಲದೆ ಇದ್ದರು. ಆ ಶತಮಾನದ ಕೊನೆಯಲ್ಲಿ ಚೀನೀಯರು ಕೋರಿಯಾ ದೇಶವನ್ನು ಆಕ್ರಮಿಸಲು ಹವಣಿಸಿದರು. ಇದರಿಂದ ತಮ್ಮ ನೆರೆಯವರು ಹೆಚ್ಚು ಬಲಿಷ್ಠರಾಗಿ, ತಮ್ಮ ದೇಶಕ್ಕೆ ಕಂಟಕರಾಗಿ ಪರಿಣಮಿಸುವರೆಂದೂಹಿಸಿ ಜಪಾನೀಯರು ಚೀನೀಯರೊಡನೆ ಕಾದಿದರು. ಅದರಲ್ಲಿ ಗೆಲಿದು ತಮ್ಮ ದಿಗಿಲನ್ನು ಕಳೆದುಕೊಂಡರು. ಇಷ್ಟರಲ್ಲಿ ರಶಿಯವು ೫೦೦೦ ಮೈಲು ದೂರ

ದಲ್ಲಿರುವ ಮಂಚೂರಿಯ ಕೋರಿಯಗಳನ್ನು ನುಂಗಬೇಕೆಂದು ಹವಣಿಸಿತು. ಪೂರ್ವ ರಷ್ಯದಲ್ಲಿ ಮಿತ್ತ್ರ ಸೇನೆ ಬೀಡುಬಿಟ್ಟುದನ್ನು ಕಂಡು, ಜಪಾನು 'ರಷ್ಯವು ಆ ದೇಶಗಳನ್ನು ಜಯಿಸಿ ಬಲಿತು ನಿಂತರೆ ನಮ್ಮ ಸ್ವಾತಂತ್ರ್ಯಕ್ಕೆ ಅತ್ತಿ ಬಂದೀತು' ಎಂದು ಯೋಚಿಸಿತು. ೧೯೦೪ರಲ್ಲಿ ರಷ್ಯದೊಡನೆ ಹೋರಾಡಿ ಗೆದ್ದು ಬಲಿಷ್ಠವಾಯಿತು. ಮುಂದೆ ಮೂರು ವರ್ಷಗಳ ತರುವಾಯ ಜಪಾನು ಕೋರಿಯವನ್ನು ವಶಪಡಿಸಿಕೊಂಡು ಏಷ್ಯಖಂಡದ ಮುಖ್ಯಭೂಮಿಯ ಪಾಳೆಗಾರಿಕೆಯನ್ನು ತಾಳಿತು.

ಜಪಾನು ದೇಶವು ಚೀನದಲ್ಲಿ ೬೦೦ ಕೋಟಿ ರೂಪಾಯಿಗಳ ಬಂಡವಾಳವನ್ನು ತೊಡಗಿಸಿರುವನು. ಇದರಂತೆ ಇತರ ಪಾಶ್ಚಾತ್ಯ ರಾಷ್ಟ್ರಗಳೂ ಅಲ್ಲಿ ಧನವಿನಿಯೋಗವನ್ನು ಮಾಡಿವೆ. ಸದ್ಯಕ್ಕೆ ಜಪಾನೀಯರು ಚೀನದಲ್ಲಿ ಏನನ್ನಪೇಕ್ಷಿಸುವರೆಂಬುದನ್ನು ನಿರ್ದಿಷ್ಟವಾಗಿ ಹೇಳಿರುವುದಿಲ್ಲ. ಆದರೂ ಸಂಯುಕ್ತ ಅಮೇರಿಕವು ದಕ್ಷಿಣ ಅಮೆರಿಕದಿಂದ ಮನ್‌ರೊ ಡಾಕ್ಟ್ರಿನ್ (Monroe Doctrine) ಮೂಲಕ ಆರ್ಥಿಕ ಮೊದಲಾದ ಪ್ರತಿಫಲಗಳನ್ನು ಹೊಂದುತ್ತಿರುವಂತೆ, ತನಗೆ ಚೀನದಲ್ಲಿ ಅನುಕೂಲತೆಗಳು ದೊರೆಯಬೇಕೆಂಬ ಬಗ್ಗೆ ಜಪಾನೀಯರು ಕಾರ್ಯಗಳನ್ನು ಕೈಕೊಂಡಿರುವರು. ಎಂಟು ಹತ್ತು ಸಾವಿರ ಮೈಲುಗಳ ದೂರದಿಂದ ಬಂದು ಪಾಶ್ಚಾತ್ಯರು ಅಲ್ಲಿ ಆರ್ಥಿಕ ಸೌಕರ್ಯಗಳನ್ನು ಪಡೆಯುತ್ತಿರಲು, ಕೇವಲ ನೂರೈವತ್ತು ಮೈಲುಗಳಂತರದಲ್ಲಿರುವ ತಾವೇಕೆ ಅವನ್ನು ಹೊಂದಲಾಗದು ಎಂದವರ ವಾದ. ಅಥವಾ ಬಿಳಿಯ ಜನಾಂಗವನ್ನು ಚೀನದಿಂದ ಓಡಿಸದಿದ್ದರೆ ತನಗಲ್ಲಿ ಪೌರೋಹಿತ್ಯವು ಸಿಗಲಾರದೆಂದು ಜಪಾನು ತಿಳಿದಿದೆಯೇನೋ! ಇಂದು ಚೀನದೊಡನೆ ಜಪಾನು ಯುದ್ಧವನ್ನು ಹೂಡಿರುವುದು ಆರ್ಥಿಕ ಮಹತ್ವಾಕಾಂಕ್ಷೆಗಾಗಿ ಅಲ್ಲದೆ ರಾಜ್ಯವಿಸ್ತಾರಕ್ಕಾಗಿ ಅಲ್ಲ.

---

# ೨. ಜಪಾನೀಯರ ವಂಶ

●

ಜಪಾನೀಯರು ಯಾವ ಜನಾಂಗದಿಂದ ಉತ್ಪನ್ನರಾದರೆಂಬುದನ್ನು ಹೇಳುವುದೆ ಕಷ್ಟಕರವಾದುದು. ಒಟ್ಟಿನಲ್ಲಿ ಇಂದಿನ ಜಪಾನಿನ ಜನಾಂಗವು ಕಲಸುಮೇಲೋಗರ ಜನಾಂಗವೆಂದು ಹೇಳಿದರೆ ಸಾಕಾಗಿದೆ. ಇವರ ರಕ್ತದಲ್ಲಿ ಮಂಗೋಲಿಯ, ಕೋರಿಯ, ಮಲೇ ಮತ್ತು ದ್ರಾವಿಡ ಜನಾಂಗಗಳ ರಕ್ತದ ಬಿಂದುಗಳಿವೆಯೆಂದು ಅನೇಕ ಜಪಾನೀಯ ವಿದ್ವಾಂಸರು ಒಪ್ಪಿರುವರು. ಜಪಾನೀಯರ ಮೂಲಜನಾಂಗದ ವಿಷಯವಾಗಿ ಅನೇಕ ವಾದಗಳಿವೆ. (ಅ) ಚೀನೀಯರ ಕಥಾನುಸಾರವಾಗಿ ಎಂದರೆ ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಕೆಲವು ಚೀನೀಯ ತರುಣ ತರುಣಿಯರು ಇಲ್ಲಿ ಬಂದು ನೆಲಸಿ ಜನಾಂಗವನ್ನುಂಟುಮಾಡಿದರೆಂದೂ, (ಆ) ಅಲ್ಟಾಯಿ ಪರ್ವತದಿಂದ (Altai Mountain) ಬಂದು ನೆಲೆಸಿಂತವರೆಂದೂ, (ಇ) ಕೆಲವು ಮಂಗೋಲಿಯ ಮತ್ತು ಮಲೇ ನಿವಾಸಿಗಳು ಬಂದು ಜನಾಂಗವನ್ನು ಮಾಡಿದರೆಂದೂ, (ಈ) ಸಮುದ್ರ ವ್ಯಾಪಾರದಲ್ಲಿ ತೊಡಗಿದ್ದ ದ್ರಾವಿಡರು ದಾರಿತಪ್ಪಿ ಇಲ್ಲಿಗೆ ಬಂದು ನೆಲಸಿ ಈ ಜನಾಂಗವನ್ನು ಹಡೆದರೆಂಬೂ ವಾದಗಳಿವೆ. (ಉ) "ನಮ್ಮ ಜನಾಂಗವು ನೇರವಾಗಿ ಸ್ವರ್ಗದಿಂದ ಬಂದು ಜಪಾನಿನಲ್ಲಿ ನೆಲಸಿತು" ಎಂದು ಸ್ವಾಭಿಮಾನಿಗಳು ಹೇಳುತ್ತಾರೆ!

ಸೂರ್ಯದೇವನಿಂದ ಈ ದೇಶದ ನಿರ್ಮಾಣವಾಯಿತೆಂದು ಪೌರಾಣಿಕ ಮತವಾಗಿದೆ. ಈ ಕಾರಣದಿಂದಲೇ ಅಂತೆ ಸೂರ್ಯನು ಮೊದಲು ಪೂರ್ವದಲ್ಲಿ ಹುಟ್ಟುವುದು! ಸೂರ್ಯನ ಮೊಮ್ಮಗನಾದ ಜಿಮ್ಮುವು ಕ್ರಿ. ಪೂ. ೬ನೆಯ ಶತಮಾನದಲ್ಲಿ ಜಪಾನ್ ರಾಜ್ಯವನ್ನು ಸ್ಥಾಪಿಸಿದನೆಂತಲೂ ಅಂದಿನಿಂದಿಂದಿನ ವರೆಗೂ ಅದೇ ವಂಶದವರು ರಾಜ್ಯವಾಳಿಕೊಂಡು ಬಂದಿರುವರೆಂತಲೂ ಹೇಳಲಾಗುತ್ತದೆ. ಅಂತೂ ಚಾರಿತ್ರಿಕ ದೃಷ್ಟಿಯಿಂದ

ಕ್ರಿ. ಶ. ಎರಡನೆಯ ಶತಮಾನದಿಂದ ೬ನೆಯ ಶತಮಾನದ ವರೆಗೂ ಒಂದೇ ವಂಶದವರು ಅಲ್ಲಿ ಆಳುತ್ತಿರುವುದು ಸ್ಪಷ್ಟವಾಗಿದೆ.

ಇತರ ಜನಾಂಗದವರಿಗಿಂತ ಜಪಾನೀಯರ ತಲೆ ದೊಡ್ಡದು. ಶರೀರ ಪ್ರಮಾಣಕ್ಕಿಂತ ದೊಡ್ಡದಾದ ಈ ತಲೆ ಸ್ವಲ್ಪ ವಿಕಾರವಾಗಿ ಕಾಣು ವುದು. ಈ ದಪ್ಪ ತಲೆಗೆ ಹೆಚ್ಚಿನ ಮೀನಾಹಾರವೇ ಕಾರಣವೆಂದು ಹಲವರ ಮತ.(The cerebral dimensions be attributed to the use of a fish diet, which is said to supply phosphrus to the brain)* ಈ ವಂಶದವರ ಇನ್ನೊಂದು ಕುರುಹೆಂದರೆ ಕಿರಿಕಾಲುಗಳು. ಇವರ ಮೂಲ ವಂಶೀಯರಾದ ಮಂಗೋಲಿಯರು ಯಾವಾಗಲೂ ಅಶ್ವಾರೋಹಣಮಾಡುತ್ತಿದ್ದುದರಿಂದ ಮತ್ತೀಗಿನ ಜಪಾನೀಯರು ಮನೆಯಲ್ಲಿ ಕೂಡ್ರುವಾಗ ಕಾಲುಗಳನ್ನು ಮಡಿಚಿ ಸೊಂಟದ ಕೆಳಗಿಟ್ಟುಕೊಂಡು ಕುಳಿತುಕೊಳ್ಳುವುದರಿಂದ ಅವರ ಕಾಲುಗಳ ಬೆಳವಣಿಗೆ ಕುಂಠಿತವಾಯಿತೆಂದು ಹೇಳಲಾಗುತ್ತಿದೆ. ಕಳೆದ ಹತ್ತಾರುವರ್ಷಗಳಿಂದ ಸಾಮಾನ್ಯ ಜನರು ಮನೆಗಳಲ್ಲಿ ಕುರ್ಚಿ ಬೆಂಚು ಮೊದಲಾದುವನ್ನು ಉಪಯೋಗಿಸುತ್ತಿರುವುದರಿಂದ ಅವರ ಕಾಲುಗಳು ದೊಡ್ಡ ವಾಗಿರುವುದನ್ನು ಕಾಣಬಹುದು. ಪಾಶ್ಚಾತ್ಯ ರೀತಿಯ ಶರೀರ ವ್ಯಾಯಾಮಗಳಿಂದ, ಜಪಾನದ ಹಿಂದಿನ ಜನಾಂಗಕ್ಕಿಂತ ಇಂದಿನ ಜನಾಂ ಗವು ಮೂರುನಾಲ್ಕು ಅಂಗುಲಗಳಷ್ಟು ಎತ್ತರವಾಗಿರುವುದು. ೫॥ ಅಡಿ ಎತ್ತರದ ಹುಡಿಗಿಯರನ್ನು ಪಟ್ಟಣದ ಎಲ್ಲಾ ಭಾಗಗಳಲ್ಲಿಯೂ ಕಾಣಬಹುದು. ೬ ಅಡಿಗಳಿಗಿಂತಲೂ ಎತ್ತರವಾಗಿ ಬೆಳೆದವರೂ ಇದ್ದಾರೆ. ಗಂಡಸಿನಂತೆ ಹೆಂಗಸೂ ಪಾದರಕ್ಷೆಗಳನ್ನು ಮೆಟ್ಟುತ್ತಾಳೆ. ಬಡವರು ಮರದ ಪಾದರಕ್ಷೆಗಳನ್ನು ಧರಿಸುವರು. ಬೀದಿಗಳಲ್ಲಿ ಬರಿಗಾಲಿನಿಂದ ತಿರುಗಕೂಡದೆಂದು ನಿರ್ಬಂಧವಿದೆ. ಈ ನಿಯಮದ ಭಂಗಕ್ಕೆ ಎಂಟಾಣೆ ದಂಡ.

ಇಲ್ಲಿ ಹಳದಿಗಿಂತ ಕೆಂದುಬಣ್ಣದ ಚರ್ಮದವರೇ ಹೆಚ್ಚು. ಕಪ್ಪಾದ

---

* Dr. Nitole: Modern Ja an.

ಕೂದಲು ನೀಳವಾಗಿ ಬೆಳೆದಿರುತ್ತವೆ. ಇಲ್ಲಿಯ ಸ್ತ್ರೀಯರು ನಮ್ಮ ಭಾರತೀಯ ಸ್ತ್ರೀಯರಂತೆ ನಡುಬೈತಲೆ ತೆಗೆದು ತಲೆಯನ್ನು ಬಾಚಿರುವರು. ೫೦ ವರ್ಷಗಳ ಹಿಂದೆ ಗಂಡಸರು ಜುಟ್ಟು ಬಿಟ್ಟಿರುತ್ತಿದ್ದರು. ಈಗ ನವನಾಗರಿಕತೆಯು ದೇಶದಲ್ಲಿ ಕಾಲಿಟ್ಟುದರಿಂದ ಅದನ್ನು ಬಿಟ್ಟು ಬಿಟ್ಟಿರುವರು. ಅನೇಕ ಸಂಪ್ರದಾಯಾಭಿಮಾನಿ ಬೌದ್ಧರು ತಲೆಯನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾರೆ. ಜಪಾನೀಯರ ಸಣ್ಣ ಕಣ್ಣು ಕಪ್ಪಿರುವುದು. ಇವರ ಲಿಪಿಯು ಒಳ್ಳೆಯ ಕಠಿಣವಾಗಿ ಚಿತ್ರವಿಚಿತ್ರವಾಗಿರುವುದರಿಂದ ಓದುವರ ಕಣ್ಣುಗಳನ್ನು ಕೆಡಿಸುವುದು. ಆದುದರಿಂದ ೧೦೦ಕ್ಕೆ ೬೦ರಷ್ಟು ವಿದ್ಯಾರ್ಥಿಗಳು ಕನ್ನಡಕ ಹಾಕಿದವರಾಗಿರುವರು. ಮೂಗು ಚಪ್ಪಟೆಯಾಗಿರುವುದು. ಅದರಿಂದ ಮುಖವು ತೀರ ಅವಲಕ್ಷಣವಾಗಿ ತೋರುವುದು. ಇತ್ತೀಚೆಗೆ ಮಾತ್ರ ನಿಡಿಮೂಗಿನಿಂದಲೂ ದೊಡ್ಡ ಕಣ್ಣುಗಳಿಂದಲೂ ಒಪ್ಪುವ ಮುಖಗಳು ಹೆಚ್ಚುತ್ತಿವೆ. ಇಲ್ಲಿಯ ತರುಣಿಯರು ರೇಶಿಮೆಯ ಉಡುಪನ್ನುಟ್ಟು ಬೀದಿಯಲ್ಲಿ ಓಡಾಡುವುದನ್ನು ನೋಡಿದರೆ ಪ್ರತಿಯೊಬ್ಬ ತರುಣನೂ ಉಲ್ಲಸಿತನಾಗುವನು. ಈ ಕಾರಣದಿಂದಲೇ ಅನೇಕ ಅಂತರರಾಷ್ಟ್ರೀಯ ವಿವಾಹಗಳಾಗುತ್ತಿರುವವು. ನಯವಿನಯ ಭಕ್ತಿಗಳಲ್ಲಿ ಜಪಾನೀಯ ಮಹಿಳೆಯರು ಪ್ರಶಸ್ತಿಯನ್ನು ಪಡೆದಿರುವರು.

ಜಪಾನೀಯರು ಕ್ಷಾತ್ರಜನಾಂಗದವರು. ಆದುದರಿಂದಲೇ ಪ್ರತಿಯೊಬ್ಬನೂ ಶೂರ ಸೈನಿಕನಾಗಲು ಅರ್ಹನಾಗಿರುವನು. ಇವರು ಹೇಳಿದುದನ್ನು ಕೇಳಿಕೊಂಡು ನಡೆಯುವ ಸ್ವಭಾವದವರು. ಇದಿರುವಾದಿಸುವುದಿವರಿಗೆ ತಿಳಿಯದು. ದೇಶಕ್ಕಾಗಿ ಜೀವ ಕೊಡುವ ಗುಣವು ಇವರಲ್ಲಿ ರಕ್ತಗತವಾಗಿರುವುದು. ದೇಶಕ್ಕಾಗುವ ಅವಮರ್ಯಾದೆಯನ್ನು ಇವರು ಎಷ್ಟು ಮಾತ್ರಕ್ಕೂ ಸಹಿಸರು. ಕೋಟ್ಯಧೀಶ್ವರನ ಮೊದಲುಗೊಂಡು ಎಂಟಾಣೆಯ ದಿನಗೂಲಿಯವನವರೆಗೂ ಪ್ರತಿಯೊಬ್ಬನು ತನ್ನ ದೇಶ, ತನ್ನ ಹಿರಿಯರ ದೇಶ ಎಂಬ ಅಭಿಮಾನದಿಂದ ಅದಕ್ಕಾಗಿ ಬೇಕಾದಂತಹ ತ್ಯಾಗವನ್ನು ಮಾಡಲೂ ಕಂಕಣಬದ್ಧನಾಗಿರುವನು.

ಜೀವನವನ್ನು ಶಾಂತತೆಯಿಂದಲೂ ಸರಳತೆಯಿಂದಲೂ ತೂಗಿಸಿಕೊಂಡು ಹೋಗುವ ಪದ್ಧತಿ ಇವರದಾಗಿದೆ. ನವನಾಗರಿಕತೆ ಮಿತಿಮೀರಿದ್ದರೂ ಯೋಗ್ಯವಾದ ಹಳೆಯ ಸಂಪ್ರದಾಯಗಳನ್ನು ಜೊತೆಯಲ್ಲಿ ನಡಸಿಕೊಂಡು ಬರುತ್ತಿರುವರು. ಸರಕಾರಿ ನೌಕರನು ಪ್ರತಿಯೊಬ್ಬನು ತಾನು ದುಡ್ಡಿಗಾಗಿ ದುಡಿಯುವುದಿಲ್ಲ; ದೇಶಹಿತಕ್ಕಾಗಿ ಸೇವೆ ಮಾಡುವೆನು ಎಂಬ ಭಾವನೆಯಿಂದ ಅತ್ಯಲ್ಪ ಸಂಬಳದಿಂದಲೆ ಕೆಲಸ ಮಾಡುತ್ತಿರುವನು. ಪರಸ್ಪರ ಜಗಳವಾಡುವ, ನ್ಯಾಯಾಸ್ಥಾನಗಳನ್ನು ಹತ್ತುವ ಗುಣವೆ ಇವರ ರಕ್ತದಲ್ಲಿಲ್ಲ. ಜಪಾನು ಎಲ್ಲ ವಿಧಗಳಲ್ಲಿ ಮುಂದುವರಿದಿದ್ದರೂ ವಕೀಲ ಸಂಡಣಿಯ ವಿಷಯದಲ್ಲಿ ನಿಕೃಷ್ಟಕ್ಕಿಂತ ನಿಕೃಷ್ಟವಾಗಿರುವುದು.



# ೩. ಚರಿತ್ರೆ



ಚಾರಿತ್ರಿಕವಾಗಿ ಜಪಾನು ಇತರ ಪೂರ್ವದೇಶಗಳಿಗಿಂತ ಇತ್ತೀಚಿನದು. ಇದರ ಪುರಾಣವೂ ಬಹು ಪ್ರಾಚೀನವಾದುದಲ್ಲ. ಪೌರ್ವಾತ್ಯ ನಾಗರಿಕತೆಯ ದೃಷ್ಟಿಯಲ್ಲಿ ಜಪಾನು ಯಾವ ಮಾನಮರ್ಯಾದೆಗಳನ್ನೂ ವಹಿಸುವುದಿಲ್ಲ. ಭೌತಿಕವಾದ (Materialism) ದಲ್ಲಿಯೂ ಜಪಾನು ಅನುಸರಿಸಿದೆಯೆಂದಮೇಲೆ ಇದರ ಗಣ್ಯತೆ ಏತರಲ್ಲಿದೆ? ಪೌರ್ವಾತ್ಯ ಪಾಶ್ಚಾತ್ಯ ನಾಗರಿಕತೆಗಳೆರಡನ್ನೂ ಬೆರಸಿಕೊಂಡು ತನ್ನ ದೇಶಕ್ಕೆ ಒಗ್ಗುವಂತೆ ಉಪಯೋಗಿಸಿಕೊಂಡು ತನ್ನ ಸ್ವಾತಂತ್ರ್ಯವನ್ನು ಅಬಾಧಿತವಾಗಿ ಕಾಯ್ದುಕೊಂಡುದರಲ್ಲಿಯೇ ಅದರ ಗಣ್ಯತೆಯಿದೆ.

ಕ್ರಿ. ಪೂ. ೬ನೆಯ ಶತಮಾನಕ್ಕಿಂತ ಮೊದಲು 'ಅಮತ್ಸುರತೇರ ಕಾಮಿ' ಎಂಬ ಸೂರ್ಯದೇವತೆಯು ಸ್ವರ್ಗಲೋಕದಿಂದ ಬಂದು ಜಪಾನು ರಾಜ್ಯವನ್ನು ಸ್ಥಾಪಿಸಿದಳೆಂದು ಪೌರಾಣಿಕ ಪ್ರತಿಪಾದನೆಯು ಉಂಟು. ಆಕೆಯ ಮೊಮ್ಮಗನಾದ ಜಿಮ್ಮುವು ಕ್ರಿ. ಪೂ. ೬೬೦ರಲ್ಲಿ ರಾಜ್ಯಸೂತ್ರಗಳನ್ನು ಕೈಕೊಂಡು ಮೊದಲನೆಯ ಚಕ್ರವರ್ತಿಯಾಗಿ ರಾಜ್ಯವಾಳಿದನೆಂದು ಕೂಡ ಹೇಳಿದೆ. ಆದರೆ ಚಾರಿತ್ರಿಕ ದೃಷ್ಟಿಯಿಂದ ಮೇಲ್ಕಂಡ ಸಂಗತಿಯು ಇನ್ನೂ ನಿರ್ಧರಿಸಲ್ಪಡಬೇಕಾಗಿದೆ. ಪುರಾಣವೇನು ಹೇಳಿದರೂ ಏಸ್ಯಖಂಡದಿಂದ ಹಳದಿ ಜನಾಂಗವೂ ದಕ್ಷಿಣ ಸಮುದ್ರದಿಂದ ಮಲೇಯರೂ ದ್ರಾವಿಡರೂ ಜಪಾನಿಗೆ ಬಂದು "ಯಮತೋ ಪಂಗಡ" (Yamato Tribe) ಎಂಬ ಹೆಸರಿನಲ್ಲಿ ವಾಸಿಸಿದರೆಂದು ಐತಿಹಾಸಿಕ ದೃಷ್ಟಾಂತಗಳು ಸಿಗುತ್ತವೆ. ಭಾರತೀಯರು ತಾವು ಆರ್ಯಕುಲದವರೆಂದು ಹೆಮ್ಮೆ ಪಡುವಂತೆ, ಜಪಾನೀಯರು ತಾವು ಯಮತೋ ಕುಲದವರೆಂದು ಹೆಮ್ಮೆಪಡುವರು.

ಕೆಲಕಾಲದ ವರೆಗೆ ಈ ಯಮತೋ ಕುಲದವರು ಸಮುದ್ರ ನದಿಗಳ ದಂಡೆಯಲ್ಲಿಯೂ ಪರ್ವತಗಳ ತಪ್ಪಲುಗಳಲ್ಲಿಯೂ ಗುಡಿಸಲುಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಮೀನುಗಳು ಮತ್ತು ಪ್ರಕೃತಿದತ್ತವಾದ ಗಡ್ಡೆಗೆಣಸುಗಳು ಮಾತ್ರವೇ ಅವರ ಆಹಾರವಾಗಿತ್ತು. ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಇಂಡೋ-ಚೀನಾ ನಿವಾಸಿಗಳು ಇಲ್ಲಿಗೆ ಬಂದು ಬತ್ತ ಮೊದಲಾದವುಗಳ ವ್ಯವಸಾಯವನ್ನು ಆರಂಭಿಸಿದರು; ಅಲ್ಲಿಂದೀಚೆಗೆ ಮೂಲನಿವಾಸಿಗಳೂ ಅದನ್ನೇ ಸಾಗಿಸಿಕೊಂಡು ಬಂದಿರುವರೆಂದು ಗೊತ್ತಾಗುವುದು.

ಕ್ರಿ. ಪೂ. ೬೬೦ ರಿಂದ ಕ್ರಿ. ಶ. ೫೩೧ ರ ವರೆಗಿನ ಕಾಲವನ್ನು ಸಾಂಪ್ರದಾಯಿಕ ಕಾಲವೆಂದು ಕರೆಯಬಹುದು. ಈ ಸಾವಿರ ವರ್ಷಗಳಲ್ಲಿ ದೇಶವು ಯಾವ ಸ್ಥಿತಿಯಲ್ಲಿದ್ದಿತೆಂಬುದನ್ನು ತಿಳಿಸುವ ಯಾವ ಗ್ರಂಥವೂ ಸಿಕ್ಕಿರುವುದಿಲ್ಲ. ಕ್ರಿ. ಶ. ೫೩೧ರಲ್ಲಿ 'ಕೊಜಿಕಿ' (Antiquities) ಎಂಬ ಗ್ರಂಥವು ಮೊದಲನೆಯ ಬಾರಿ ಬರೆಯಲ್ಪಟ್ಟಿತು. ಇದರಲ್ಲಿ ಹಿಂದಿನ ಕಾಲದ ವಾಡಿಕೆಗಳನ್ನೆಲ್ಲ ವಿವರಿಸಲಾಗಿದೆ.

ಯಮತೋ ಜನಾಂಗವು ದೇಶದಲ್ಲಿ ಶಾಂತವಾಗಿ ನೆಲಸಿದ ಮೇಲೆ ರಾಜಕೀಯ ವ್ಯವಸ್ಥೆಯು ಪ್ರಾರಂಭವಾಯಿತು. ಅರಸು ಮನೆತನವು ಆದಿಮನೆತನವೆಂದೂ ಮಿಕ್ಕೆಲ್ಲ ಜನರ ಮನೆತನಗಳು ಅದರ ಕವಲುಗಳೆಂದೂ ಆಗಿನ ಜನರ ನಂಬಿಕೆಯಿತ್ತು. ಅದರಂತೆ ರಾಜನೇ ಸರ್ವರ ಒಡೆಯನೆಂದು ತಿಳಿದು, ಜನರು ಅವನ ವಶಕ್ಕೆ ರಾಜ್ಯವನ್ನು ಒಪ್ಪಿಸಿ ತಾವಾತನ ಅಪ್ಪಣೆಯಂತೆ ನಡೆದುಕೊಳ್ಳುತ್ತಿದ್ದರು. ಇಂದಿಗೂ ರಾಜನ ಮನೆ ಬೇರೆ, ಪ್ರಜೆಗಳ ಮನೆಗಳು ಬೇರೆ, ರಾಜನು ಬೇರೆ, ಪ್ರಜೆಗಳು ಬೇರೆ ಎಂಬುದರಲ್ಲಿ ಅರ್ಥವಿಲ್ಲ. ಇಡೀ ದೇಶವೇ ಒಂದು ಮನೆ, ಸರ್ವ ಮಾನವರು ಸರಿಸಮಾನರು ಎಂಬ ನಂಬಿಕೆಯು ಆಚಂದ್ರಾರ್ಕವಾಗಿ ನಡೆದುಕೊಂಡು ಬಂದಿರುವುದು. 'ತೆನ್ನೊ' (Tenno) ಎಂದರೆ ಚಕ್ರವರ್ತಿ ಎಂಬರ್ಥವನ್ನು ಮಾಡಿಕೊಳ್ಳಬಹುದು. ಆದರೆ ಇದರರ್ಥವು ಇದಕ್ಕಿಂತ ಬೇರೆಯಾಗಿ 'ನಾವಿಷ್ಣುಃ ಪೃಥಿವೀ ಪತಿಃ' ಎಂಬ ರೀತಿಯಲ್ಲಿ

ಹೊಂದುವುದು. (The Emperor of Japan who sprang from mythology is man-god. All Japanese believe in this. The Emperor is a man and a God at the same time, in the fundamental concetion of the Japanese race.)* ಇಲ್ಲಿಯ ಅರಸನಿಗೆ ಮಿಕಡೋ (Mikado) ಎಂದು ಹೆಸರು. ಮರ್ಯಾದೆಯ ಮಾರ್ಗ ಎಂದು ಈ ಶಬ್ದದ ಅರ್ಥ.

ಕ್ರಿ. ಶ. ೧ ನೆಯ ಶತಮಾನದಿಂದ ೫ ನೆಯ ಶತಮಾನದ ವರೆಗೆ ಮಿಕಡೊ ಚಕ್ರವರ್ತಿಗಳು ಹುಜಿ (Uji) ಮನೆತನದವರ ಸಹಾಯದಿಂದ ರಾಜ್ಯವನ್ನು ಆಳಿಕೊಂಡಿದ್ದರು. ಒಂದು ಕಾಲದಲ್ಲಿ ಹುಜಿ ಮನೆತನದ ವರು ಸಾಗುವಳಿಯ ಭೂಮಿಯನ್ನು ಸಾರ್ವತ್ರಿಕವಾಗಿ ನಡಸಿಕೊಂಡು ಕಾಲಯಾಪನೆ ಮಾಡುತ್ತಿದ್ದಂತೆ ಗೊತ್ತಾಗುತ್ತದೆ. ಕಾಲಕ್ರಮದಲ್ಲಿ ಆಶೆ ಕ್ರೋಧಗಳು ಹೆಚ್ಚಾಗಿ ರಾಜ್ಯಾಡಳಿತವು ಹುಜಿಗಳ ಕೈತಪ್ಪಿ, ಕಬಾನೆ (Kabane) ಎಂಬ ಮನೆತನದವರ ಕೈಗೆ ಹೋಯಿತು. ಅವರು ಕೂಡ ಹೆಚ್ಚು ಕಾಲ ಅದನ್ನು ತಮ್ಮ ಕೈಯಲ್ಲುಳಿಸಿಕೊಳ್ಳದೆ ಇತರ ಪಾಳಯಗಾರರ ಪಾಲು ಮಾಡಿದರು.

ಜಪಾನಿನ ನಾಗರಿಕತ್ವವು ಹೇಚ್ಚಾಗಿ ಆಮದಾದುದು. ಕೆಲವೇ ಸ್ವೀಯ ನಾಗರಿಕತೆಯ ವಿಷಯಗಳನ್ನುಳಿದು ಎಲ್ಲವೂ ಚೀನ ಭಾರತ ಗಳಿಂದ ಬಂದುವೆಂಬ ಬಗ್ಗೆ ಚಾರಿತ್ರಿಕ ದೃಷ್ಟಾಂತಗಳಿವೆ. ಚೀನೀಯ ನಾಗರಿಕತ್ವವು ಜಪಾನಿನ ಕಾಡಿಗರನ್ನು ನಾಡಿಗರನ್ನಾಗಿ ಮಾಡಿತು. ಇವರ ಪ್ರಗತಿಗದೇ ಮೂಲವಾಯಿತು. ಜಪಾನೀಯರ ಇತಿಹಾಸವು ಶಾಸ್ತ್ರೋಕ್ತವಾಗಿ ನಾಲ್ಕು ಕಾಲ ಖಂಡಗಳಲ್ಲಿ ಬೆಳೆದುಕೊಂಡು ಬಂದಿದೆ. (ಅ) ನರಾಕಾಲ (Nara Age 710-793 A. D.), (ಆ) ಹೇಹಿನ್ ಕಾಲ (Heian Age 794-1192 A. D.), (ಇ) ಮುರೋಮಾಚಿ ಕಾಲ (Muromachi Age 1338-1602 A. D.), (ಈ)ಯೋದೊ

* Japan in Advance by Kenkokukinjigiyo-Kyokai.

ಕಾಲ (Yedo Age 1602-1862 A. D.) ಮತ್ತು ಹೊಸ ಕಾಲ (New Age) ಗಳೆಂಬಲಿಂದೀಚೆಗೆ.

**(ಅ) ನರಾಕಾಲ** (ಕ್ರಿ. ಶ. ೭೧೦-೭೯೪):— ಈ ಕಾಲವು ಇತರ ಕಾಲಗಳಿಗಿಂತ ಮಹತ್ವದ್ದು. ಈಗಲೇ ಜಪಾನು ಅನಾಗರಿಕತ್ವದಿಂದ ನಾಗರಿಕತ್ವದ ಮೆಟ್ಟಿಲನ್ನೇರಿತು. ಸಣ್ಣ ಸಣ್ಣ ಕೈಗಾರಿಕೆಗಳು ಈಗಲೇ ಬೆಳಕಿಗೆ ಬಂದು ಜನರ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿದುವು. ಚೀನ ದೇಶದ ಬೌದ್ಧ ಸಂನ್ಯಾಸಿಗಳು ಇಲ್ಲಿಯ ಜನರಿಗೆ ಪಾರಮಾರ್ಥಕ್ಕೆ ಬೇಕಾದ ಧರ್ಮವನ್ನು ತರುವುದರ ಜೊತೆಗೆ, ಲೌಕಿಕ ಸುಖಕ್ಕಾಗಿ ಈ ಚಿಕ್ಕ ಚಿಕ್ಕ ಕೈಗಾರಿಕೆಗಳನ್ನೂ ತಂದರು; ಮತ್ತು ಅವನ್ನು ಹೇಗೆ ನಡೆಸಬೇಕೆಂಬುದನ್ನು ಈ ಜನರಿಗೆ ಕಲಿಸಿಕೊಟ್ಟರು. ಇದರಿಂದ ದೇಶದ ಆರ್ಥಿಕ ಸ್ಥಿತಿ ಸುಧಾರಿಸುತ್ತ ಬಂದಹಾಗೆ ಜನಗಳು ಬೌದ್ಧ ಧರ್ಮವನ್ನು ಅವಲಂಬಿಸತೊಡಗಿದರು. ಇಲ್ಲಿಯ ಜನರು ಬೌದ್ಧಧರ್ಮ ತತ್ತ್ವಗಳನ್ನು ಚೆನ್ನಾಗಿ ಮನಸದಟ್ಟು ಮಾಡಿಕೊಂಡೇ ಅದಕ್ಕೆ ಸೇರಿದರಲ್ಲದೆ, ಸಂತೆಯಲ್ಲಿ ಪ್ರವಚನಗಳನ್ನು ಕೇಳಿಯಲ್ಲ; ಬರಗಾಲದಲ್ಲಿ ಹೊಟ್ಟೆಹೊರೆಯುವುದಕ್ಕಲ್ಲ; ಧನಪದವಿಗಳಿಗಾಸೆಪಟ್ಟಲ್ಲ. ಬೌದ್ಧ ಸನ್ಯಾಸಿಗಳು ಧರ್ಮ ಪ್ರಚಾರಕ್ಕೆ ಬಲಾತ್ಕಾರದ ಮಾರ್ಗವನ್ನು ಹಿಡಿಯಲಿಲ್ಲ. ಬೌದ್ಧ ತತ್ತ್ವಗಳ ಚೆಲಿಯನ್ನು ಕಂಡುಂಡೇ ಜನರು ಬೌದ್ಧರಾದುದರಿಂದ, ಇಂದಿಗೂ ಜಪಾನೀಯರಲ್ಲಿ ೧೦೦ಕ್ಕೆ ೯೦ ರಷ್ಟು ಜನರು ಬೌದ್ಧರಾಗಿ ಉಳಿದಿರುವುದು.

ಬೌದ್ಧ ಧರ್ಮವು ಇಷ್ಟು ಬೇಗನೆ ಪ್ರಾಬಲ್ಯವನ್ನು ಪಡೆಯುವುದಕ್ಕೆ ನರಾಕಾಲದ ಸೋಕೋಕು ಚಕ್ರವರ್ತಿಯೆ ಕಾರಣನು. ಜಪಾನೀಯರು ಆತನನ್ನು 'ಜಪಾನಿನ ಅಶೋಕ ಮಹಾರಾಯ'ನೆಂದು ಕರೆಯುತ್ತಾರೆ. ಈತನು ಬೌದ್ಧಮತವನ್ನು ಪ್ರಚಾರ ಮಾಡಿದುದಲ್ಲದೆ, ದೇಶದಲ್ಲಿ ಛತ್ರಗಳನ್ನೂ ಔಷಧಾಲಯಗಳನ್ನೂ ಕಟ್ಟಿಸಿ ಜನರಿಗೆ ತುಂಬ ಉಪಕಾರ ಮಾಡಿದನು. ಚೀನ ಭರತಖಂಡಗಳಿಂದ ಶಿಲ್ಪಿಗಳನ್ನು ಕರೆಸಿಕೊಂಡು ಬೌದ್ಧ ದೇವಾಲಯಗಳನ್ನು ಕಟ್ಟಿಸಿದನು. ನಾರಪಟ್ಟಣವು ಈಗಲೂ ಬೌದ್ಧ ದೇವಾಲಯಗಳ ನೆಲೆವೀಡಾಗಿ ಕಲೆಯಿಂದ ಬೆರಗು

ಗೊಳಿಸುತ್ತಿರುವುದು. ಈ ಕಾಲದಲ್ಲಿಯೆ ಲಿಪಿಯು ಚೀನದಿಂದಿಲ್ಲಿಗೆ ಪ್ರವೇಶಮಾಡಿದುದರಿಂದ ಸಾಹಿತ್ಯಶಾಸ್ತ್ರಾದಿಗಳೂ ಪ್ರಚುರಕ್ಕೆ ಬಂದವು.

**(ಆ) ಹಿಹೀನ ಕಾಲ** (ಕ್ರಿ. ಶ. ೭೯೪-೧೧೯೩):—ಸೋಕೋಕು ಚಕ್ರವರ್ತಿಗಳ ಅನಂತರ 'ಕಮು' ಚಕ್ರವರ್ತಿಯು ಪಟ್ಟಕ್ಕೆ ಬಂದನು. ಇವನು ಮೊದಲಿನ ರಾಜಧಾನಿಯಾದ ನರಾದಿಂದ ೪೦ ಮೈಲುಗಳ ದೂರ ದಲ್ಲಿ ಹೊಸ ರಾಜಧಾನಿಯನ್ನು ಕಟ್ಟಿಸಿದನು. ಅದನ್ನು ಲಕ್ಷಾಂತರ ಕೂಲಿಕಾರರು ಹತ್ತು ವರ್ಷಗಳಲ್ಲಿ ಕಟ್ಟಿದರು. ಚೀನದ ನಾಗರಿಕತೆಯು ಬೀಡಾದ ಈ ನಗರಕ್ಕೆ 'ಕಿಯೊತೊ' (Kyoto) ಎಂದು ನಾಮಕರಣ ಮಾಡಲಾಯಿತು. ಕ್ರಿ. ಶ. ೭೯೪ ರಿಂದ ೧೮೬೭ ರ ವರೆಗೆ ನೂರಾರು ಚಕ್ರವರ್ತಿಗಳು ಕಿಯೊತೊದಲ್ಲಿ ಹೆಸರಿಗೆ ಮಾತ್ರ ರಾಜ್ಯವಾಳಿಕೊಂಡು ಬಂದರು. ಈ ನಗರಿಯು ಇಡೀ ಜಪಾನದಲ್ಲಿ ಪ್ರಾಚೀನ ಕಲಾಕೌಶಲ್ಯ ಗಳ ತವರುಮನೆಯಾಗಿ ಇಂದಿಗೂ ಮೆರೆಯುತ್ತಿರುವುದು.

ಈ ಕಾಲದಲ್ಲಿ 'ಕನಾ' (Kana) ಎಂಬ ಅಕ್ಷರಗಳು (Signs of syllabary) ಪ್ರಚುರಕ್ಕೆ ಬಂದು, ಚೀನೀಯರ ಇಪ್ಪತ್ತು ಅಥವಾ ಮೂವತ್ತು ಸಾವಿರ ಅಕ್ಷರ (Chinese ideograms) ಗಳಿಂದ ಗಳಿಸ ಬೇಕಾಗಿದ್ದ ಜ್ಞಾನವು ಸುಲಭಸಾಧ್ಯವಾಯಿತು. ಕನಾ ಲಿಪಿಯಿಂದ ಸಾಹಿತ್ಯವೂ ಮುಂದುವರಿಯಿತು. ಗಂಡುಸರು ಹೆಚ್ಚಾಗಿ ಯುದ್ಧದಲ್ಲಿ ಕಾಲಕಳೆಯುತ್ತಿದ್ದುದರಿಂದ ಸಾಹಿತ್ಯದ ಪೌರೋಹಿತ್ಯವು ಸ್ತ್ರೀಯರ ಕಡೆಗಿದ್ದಿತು. ಕಟ್ಟುಕತೆಗಳನ್ನೂ ಕವಿತೆಗಳನ್ನೂ ರಚಿಸುವುದರಲ್ಲಿ ಜಪಾನೀಯ ಸ್ತ್ರೀಯರು ಪುರುಷರಿಗಿಂತ ಇಂದೂ ಎಷ್ಟು ಮಾತ್ರಕ್ಕೂ ಹಿಂದಿಲ್ಲ. ಚೀನದಿಂದ ಬಂದಿದ್ದ ನ್ಯಾಯದ ಕಟ್ಟಳೆಗಳು ಕಾರ್ಯರೂಪದಲ್ಲಿ ಮೇಲ್ಮೆ ಯನ್ನು ಹೊಂದಲಿಲ್ಲ. ನ್ಯಾಯಾಸ್ಥಾನಗಳಲ್ಲಿ ತೀರ್ಪು ಕೊಡುವಾಗ 'ವಿಚಾರಗಳನ್ನು ಕೇಳಿ ತೀರ್ಪು ಕೊಟ್ಟಿದೆ' ಎಂಬ ಪದ್ಧತಿಯು ವಾಡಿಕೆ ಯಲ್ಲಿದ್ದಿತು. (Dori=accordiug to reason).

ಹಿಂದಿನ ಕಾಲದಲ್ಲಿ ಸಾಂಸರ್ಗಿಕವಾಗಿ ಅನುಭವಿಸಲ್ಪಡುತ್ತಿದ್ದ ಭೂಮಿಗಳು ಈ ಕಾಲದಲ್ಲಿ ಖಾಸಾಗಿ ಪರಿಣಮಿಸತೊಡಗಿದವು. ಈ

ಬದಲಾವಣೆಯನ್ನು ಚಕ್ರವರ್ತಿಗಳು ವಿರೋಧಿಸಿದರೂ ಪ್ರಯೋಜನವಾಗಲಿಲ್ಲ. ಭೂಮಿಗಳು ಖಾಸಗಿಯಾದ ಕೆಲವು ವರ್ಗಗಳೊಳಗಾಗಿ ಹಲವು ಮನೆತನಗಳು ಪ್ರಬಲವಾಗಿ ತಲೆಯೆತ್ತಿದವು. ಈ ಮನೆತನಗಳಲ್ಲಿ ಹೆಚ್ಚು ಪ್ರಬಲವಾದ 'ಫುಜಿವಾರ' ಮನೆತನವು ರಾಜ್ಯಸೂತ್ರಗಳನ್ನು ವಶಪಡಿಸಿಕೊಂಡು ರಾಜನನ್ನು ಉತ್ಸವಮೂರ್ತಿಯನ್ನಾಗಿ ಮಾಡಿತು. ಚಕ್ರವರ್ತಿಗಳಾದರೂ ಸರ್ವಾಧಿಕಾರಿಗಳು ಹಾಕಿದ ಗೆರೆಯನ್ನು ದಾಟದೆ ಕಾಲವನ್ನು ಕಳೆಯುತ್ತಾ ಬಂದರು.

ಇದೇ ಕಾಲದಲ್ಲಿ ಪಾಳಯಗಾರರ ವೈಭವವು ಹೆಚ್ಚಾದಂತೆ ದೇಶದಲ್ಲಿ ಕ್ಷೋಭೆಗೆ ಪ್ರಾರಂಭವಾಯಿತು. ಇದರಿಂದ ಕಳ್ಳಕಾಕರ ಹಾವಳಿ ಹೆಚ್ಚಿತು. ಆದರೆ ವ್ಯವಸಾಯಗಾರರು ತಕ್ಕ ಸೈನ್ಯಶಿಕ್ಷಣವನ್ನು ಪಡೆದು ಕಳ್ಳರನ್ನು ಸದೆಬಡಿದರು. ಆಮೇಲೆ ಈ ವ್ಯವಸಾಯಿ ಸೈನಿಕರು ಮರಳಿ ವ್ಯವಸಾಯಕ್ಕೆ ಸೇರದೆ, ಪಾಳಯಗಾರರ ಪಕ್ಷಕ್ಕೆ ಸೇರಿಕೊಂಡು ಶಾಸ್ತ್ರೋಕ್ತ ಯುದ್ಧವಿಶಾರದರಾದರು. ಇಷ್ಟರಲ್ಲಿ 'ಗೆರ್ಜಿ' ಮತ್ತು 'ಎಹಿಷಿ' ಪಾಳಯಗಾರರು 'ಫುಜಿವಾರ' ಪಾಳಯಗಾರರನ್ನು ಗೆದ್ದು ಅಧಿಕಾರಾರೂಢರಾದರು.

ಇಷ್ಟು ಅನಾಹುತಗಳು ನಡೆಯುತ್ತಿದ್ದರೂ ಜನರ ವಿದ್ಯಾಭ್ಯಾಸವು ಬೌದ್ಧ ಸಂನ್ಯಾಸಿಗಳ ಕೈಯಲ್ಲಿಯೆ ಇದ್ದಿತು. ಅವರು ದೇವಾಲಯಗಳಲ್ಲಿಯೆ ಬಾಲಕ ಬಾಲಕಿಯರಿಗೆ ವಿದ್ಯೆ ಕಲಿಸುತ್ತಿದ್ದರು. ಸರಕಾರದಿಂದ ಸ್ಥಾಪಿತವಾದ 'ದೈಗಾಕು'ಎನಲ್ಲಿ (School of higher learning-ವಿಶ್ವವಿದ್ಯಾಲಯ) ೪೦೦ ವಿದ್ಯಾರ್ಥಿಗಳು ಉಚ್ಚ ಶಿಕ್ಷಣವನ್ನು ಪಡೆಯುತ್ತಿದ್ದರು. ಅನೇಕ ವಿದ್ಯಾರ್ಥಿಗಳು ಚೀನ ಮೊದಲಾದ ದೇಶಗಳಿಗೂ ಕಳಿಸಲ್ಪಟ್ಟಿದ್ದರು. ಎಹೀನ ಕಾಲವು ಕ್ಷೀಣವಾದಂತೆಲ್ಲ ವಿದ್ಯಾಭ್ಯಾಸವು ದೊಡ್ಡ ಮನೆತನದವರ ಜನ್ಮಸಿದ್ಧ ಹಕ್ಕಾಗಿ ಪರಿಣಮಿಸಿತು. ಬಡವರು ಸರಸ್ವತಿಯ ಕೃಪಾಕಟಾಕ್ಷದಿಂದ ದೂರಾದರು. ಸರಕಾರದ ಹೆಚ್ಚಿನ ಕೆಲಸಗಳೆಲ್ಲ ದೊಡ್ಡಮನೆತನದವರ ಪಾಲಾದವು. ಕೂಲಿ ಕೆಲಸಕ್ಕೆ ಕೊರಿಯಾ ದೇಶದ ಸಾವಿರಾರು ಗುಲಾಮರನ್ನು ನಿಯಮಿಸಲಾಗಿತ್ತು.

(೩) ಕಮಕುರ ಕಾಲ (ಕ್ರಿ. ಶ. ೧೧೯೨–೧೩೩೩):— ಈ ಕಾಲವನ್ನು 'ಸಮುರಾಯಿ' (ಕ್ಷತ್ರಿಯ) ಕಾಲವೆಂದು ಕರೆಯಬಹುದು. ಯೋರಿಟೋಮೊ ಎಂಬ ಪಾಳಯಗಾರನು ಸಣ್ಣಪುಟ್ಟ ಪಾಳಯಗಾರರನ್ನು ಜಯಿಸಿ, ಚಕ್ರವರ್ತಿಗಳ ರಾಜಧಾನಿಯಾದ ಕಿಯೋಟೊ ಪಟ್ಟಣಕ್ಕೆ ಮುನ್ನೂರು ಮೈಲಿಗಳ ದೂರದಲ್ಲಿ, 'ಕಮಕುರ' ಎಂಬ ಪಟ್ಟಣವನ್ನು ಕಟ್ಟಿಕೊಂಡು ರಾಜ್ಯವಾಳತೊಡಗಿದನು. ೧೧೯೨ರಲ್ಲಿ ಚಕ್ರವರ್ತಿಗಳು ಈತನಿಗೆ 'ಸೇಯಿತಾಯಿ–ಷೋಗುನ್' (ಮುಖ್ಯ ಸೇನಾಪತಿ) ಎಂಬ ಬಿರುದನ್ನಿತ್ತರು. ಈ ಪಾಳಯಗಾರನು ಸರಳ ಜೀವನದಿಂದ ನಡೆದುಕೊಂಡು ರಾಜ್ಯಕ್ಕೆ ಹೆಚ್ಚು ಸಹಾಯ ಮಾಡುತ್ತಿದ್ದನು. ಇವನ ಮಂತ್ರಿಯರು ಕೂಡ ಇವನಂತೆಯೇ ಉಪಕಾರಿಗಳಾಗಿದ್ದರು.

ರಾಜ್ಯದ ಭದ್ರತೆಗಾಗಿ ಯೋರಿಟೊಮೋಯು ಸೈನಿಕರನ್ನೆಲ್ಲಾ ಒಟ್ಟಿಗೇ ಕೂಡಿಸಿ, ಅವರಿಗೆ ಕ್ಷಾತ್ರಧರ್ಮವನ್ನು ಬೋಧಿಸಿದನು. 'ಪ್ರತಿಯೊಬ್ಬ ಯೋಧನು ಪ್ರಾಮಾಣಿಕನಾಗಿರಬೇಕು; ಸರಳ ಜೀವನವನ್ನು ಅಭ್ಯಾಸಿಸಬೇಕು; ಅಬಲರಿಗೆ ನೆರವಾಗಬೇಕು; ಸಮಯ ಬಂದಾಗ ದೇಶಕ್ಕಾಗಿಯೂ ಚಕ್ರವರ್ತಿಗಳಿಗಾಗಿಯೂ ಪ್ರಾಣವನ್ನು ಧಾರೆಯೆರೆಯಲು ಸಿದ್ಧನಿರಬೇಕು.' ಎಂದು ಉಪದೇಶಿಸಿದನು. ಇಂದಿಗೂ ಮೇಲ್ಕಂಡ ತತ್ವಗಳನ್ನೊಳಗೊಂಡ ಜಪಾನೀಯರ "ಬುಷಿಡೊ" (Bushido) ಎಂಬ ವೀರ ಧರ್ಮವು ಪ್ರಖ್ಯಾತಿಯನ್ನು ಪಡೆದಿದೆ.

ಈ ಕಾಲದಲ್ಲಿ ಬೌದ್ಧ ಸಂನ್ಯಾಸಿಗಳಿಂದ ವಿದ್ಯೆಯು ಹಳ್ಳಿಹಳ್ಳಿಗೂ ಹರಡಿತು. ಸ್ತ್ರೀಯರ ಶಿಕ್ಷಣದಲ್ಲಿ ಬಟ್ಟೆ ಹೊಲಿಯುವ, ಮನೆಯನ್ನು ಶುಚಿಯಾಗಿ ಇಟ್ಟುಕೊಳ್ಳುವ ವಿಷಯಗಳೂ ಸೇರಿದ್ದವು. ಚೀನ ದೇಶದ ಸೂನ್‌ಗ ಮತ್ತು ಯಾನ್ ಅರಸರ ಕಾಲದಲ್ಲಿ ಇಲ್ಲಿಗೆ ಬಂದಿದ್ದ ಕಲೆಯೂ ಪ್ರಗತಿಪಥವನ್ನು ಹಿಡಿಯಿತು. ಆ ಕಾಲದಲ್ಲಿ ಕಮಕುರ ಪಟ್ಟಣದಲ್ಲಿ ಸ್ಥಾಪಿಸಲ್ಪಟ್ಟಿದ್ದ ೪೫ ಅಡಿ ಎತ್ತರದ ಕಿತ್ತಾಳೆಯ ಬುದ್ಧ ವಿಗ್ರಹವು ಈಗಲೂ ವಿರಾಜಿಸುತ್ತಿರುವುದು. ೪೦೦ ವರ್ಷಗಳ ಹಿಂದೆ ಉಂಟಾದ ಬಿರುಗಾಳಿಯಿಂದ ಗುಡಿಯ ಗೋಪುರ ಮೊದಲಾದವು ನಾಶವಾದರೂ

ಮೂರ್ತಿ ಅಚ್ಚಳಿಯಂದಿದೆ. ಈ ಶಾಂತಮೂರ್ತಿಯನ್ನೊಮ್ಮೆ ನೋಡಿದರೆ ನಾಸ್ತಿಕನೂ ಆಸ್ತಿಕನಾಗುವನು.

ಕಮುಕುರ ಕಾಲದಲ್ಲಿ ಚಿಕ್ಕಪುಟ್ಟ ಕೈಗಾರಿಕೆಗಳಲ್ಲಿ ದೇಶವು ಪ್ರಸಿದ್ಧಿಯನ್ನು ಪಡೆಯಿತು. ಬಟ್ಟೆ ನೇಯುವುದು, ಕುಂಬಾರಿಕೆ, ಮರದ ಕೆಲಸ ಮತ್ತು ಕಾಗದದ ಕೆಲಸಗಳು ಸುಧಾರಿಸಲ್ಪಟ್ಟವು. ದೇಶದಲ್ಲಿ ಹೆಚ್ಚು ವಸ್ತುಗಳನ್ನು ನಿರ್ಮಿಸಿದ್ದರಿಂದ ವ್ಯಾಪಾರವು ಅಭಿವೃದ್ಧಿಹೊಂದಿತು.

(ಈ) ಮುರೊಮಾಚಿ ಕಾಲ (ಕ್ರಿ. ಶ. ೧೧೩೮–೧೬೦೨):—ಕ್ರಿ. ಶ. ೧೧೩೮ರಲ್ಲಿ 'ಟಕುಚಿ ಅಷಿಗಾವ'ನೆಂಬ ಪಾಳೆಯಗಾರನು ಕಮುಕುರದ ಪಾಳೆಯಗಾರನನ್ನು ಸೋಲಿಸಿ, ತನ್ನ ರಾಜ್ಯಭಾರವನ್ನು ಹಳೆಯ ರಾಜಧಾನಿಯಾದ 'ಕಿಯೊತೊ' ನಗರದಲ್ಲಿ ಸ್ಥಾಪಿಸಿದನು. ಇವನ ಮನೆತನದವರ ಆಡಳಿತವು ಆ ನಗರದ 'ಮುರೊಮಾಚಿ' ಎಂಬ ಬೀದಿಯಲ್ಲಿಯ ಕಚೇರಿಯಲ್ಲಿ ನಡೆಯುತ್ತಿದ್ದುದರಿಂದ, ಇವರ ಆಳಿಕೆಯ ಕಾಲಕ್ಕೆ ಅದೇ ಹೆಸರುಂಟಾಯಿತು. ಟಕುಚಿ ಅಷಿಗಾವನ ಕಾಲದಲ್ಲಿ ಚೀನ ಕೋರಿಯಗಳಿಗೆ ಜಪಾನಿನ ರಾಯಭಾರಿಗಳನ್ನು ಕಳಿಸಲಾಗಿತ್ತು. ಇದರಿಂದ ಆ ದೇಶಗಳೊಡನೆ ಜಪಾನಿನ ವ್ಯಾಪಾರ ಸಂಬಂಧವು ಉತ್ತಮಗೊಂಡಿತು.

೧೨೦೬ರಲ್ಲಿ ಚೀನದಲ್ಲಿ ಅಧಿಕಾರಕ್ಕೆ ಬಂದ 'ಯೂನ್' ವಂಶೀಯರು ಪೂರ್ವ ಯುರೋಪಖಂಡದ ವರೆಗೂ ರಾಜ್ಯವನ್ನು ವಿಸ್ತರಿಸಿ ಪ್ರಖ್ಯಾತರಾದುದು ಸರಿಯಷ್ಟೆ. ಆದರೆ ೧೨೬೮ರಲ್ಲಿ ಕಾಬುಲಿಖಾನನು ಜಪಾನು ತನಗೆ ಕಪ್ಪಕಾಣಿಕೆಗಳನ್ನು ಕೊಡುತ್ತ ಆಶ್ರಿತ ಸಂಸ್ಥಾನವಾಗಿರಬೇಕೆಂದೂ ಇಲ್ಲದಿದ್ದರೆ ಅದರ ಮೇಲೆ ತಾನು ದಂಡೆತ್ತಿ ಬರುವೆನೆಂದೂ ಜಪಾನಿನ ಪಾಳೆಯಗಾರನಿಗೆ ಪತ್ರ ಬರೆದನು. ದಾಸರಾಗುವುದಕ್ಕಿಂತ ಯುದ್ಧ ಮಾಡುವುದೇ ಲೇಸೆಂದು ಪಾಳೆಯಗಾರನು ನಿಶ್ಚಯಿಸಿದನು. ತಿಳಿಸಿದಂತೆ ಕಾಬುಲಿಖಾನನು ದೊಡ್ಡ ದಂಡಿನೊಡನೆ ಜಪಾನಿನ ಮೇಲೆ ನಾಗಿಬಂದನು. ಅನೇಕ ದಿವಸಗಳ ವರೆಗೆ ಯುದ್ಧವು ನಡೆಯಿತು. ಆದರೆ ಅಕಸ್ಮಾತ್ ಬಿರುಗಾಳಿಯೆದ್ದು ಖಾನನ ಹಡಗುಗಳೆಲ್ಲಾ ನಾಶವಾದವು. ಆದರಿಂದವನು ಹಿಂದೆಗೆಯಬೇಕಾಯಿತು. ಸುದೈವದಿಂದ ಜಪಾನೀಯರ

ಸ್ವಾತಂತ್ರ್ಯವು ಉಳಿಯಿತು. ಅಂದಿನಿಂದಿಂದಿಗೂ ಇನ್ನಾರೂ ಇದನ್ನು ಆಕ್ರಮಿಸಿದುದಿಲ್ಲ.

ಕಮುಕುರ ಕಾಲದಿಂದಲೂ ಜಪಾನೀಯ ಕಡಲುಗಳ್ಳರು ಚೀನ ಮತ್ತು ಕೋರಿಯ ದೇಶಗಳ ತೀರಪಟ್ಟಣಗಳನ್ನು ಆಗಾಗ ಕೊಳ್ಳೆ ಹೊಡೆದು ಹೊಟ್ಟೆಹೊರೆದುಕೊಳ್ಳುತ್ತಿದ್ದರು. ಕ್ರಿ. ಶ. ೧೪೦೧ರಲ್ಲಿ 'ಯೋಷಿಮಿತ್ಸು ಅಷಿಕಾಗ' ಎಂಬ ಸರ್ವಾಧಿಕಾರಿಯು ಚೀನದ ಮಿಂಗ್ ಚಕ್ರವರ್ತಿಯೊಡನೆ ವ್ಯಾಪಾರದ ಕೌಲು ಮಾಡಿಕೊಂಡು ಆ ಕಡಲುಗಳ್ಳರನ್ನು ಶಿಕ್ಷಿಸಿದನು. ಜಪಾನಿನ ಬೌದ್ಧ ಸಂನ್ಯಾಸಿಗಳು ಕೂಡ ವ್ಯಾಪಾರದಲ್ಲಿ ತೊಡಗಿ, ಬಂದ ಲಾಭದಿಂದ ದೇವಾಲಯ ಛತ್ರ ಮೊದಲಾದುವನ್ನು ಕಟ್ಟಿಸುತ್ತಿದ್ದರು. ಮುರೋಮಾಚಿಯ ಕಾಲವು ಮುಗಿಯುತ್ತ ಬಂದಂತೆ ಸಮುದ್ರ ಚೋರರು ಪ್ರಬಲರಾಗಿ ಸಮುದ್ರ ವ್ಯಾಪಾರಕ್ಕೆ ತಡೆಯನ್ನು ಮಾಡಿ ಚೀನ-ಜಪಾನ ವ್ಯಾಪಾರವನ್ನು ನಷ್ಟಗೊಳಿಸಿದರು. ಈ ಕಳ್ಳರನ್ನು ಶಿಕ್ಷಿಸಲು ಕೋರಿಯ ದೇಶದ ಅರಸನು ಚೀನಾಧೀಶನಾದ 'ಲಿಸೈಕಿ'ಯ ಸಹಾಯವನ್ನು ಕೋರಿದನು. ಆದರೆ ಆತನು ಜಪಾನೀಯ ಸಾಗರ ಚೋರರನ್ನು ಶಿಕ್ಷಿಸುವುದಕ್ಕೆ ಬದಲು, ಅಬಲವಾದ ಕೋರಿಯ ದೇಶವನ್ನೇ ಆಕ್ರಮಿಸಿ ತನ್ನ ಪ್ರಭುತ್ವಕ್ಕೆ ಸೇರಿಸಿಕೊಂಡನು. ಮುರೋಮಾಚಿ ಕಾಲದ ಕೊನೆಯಲ್ಲಿ ಸರ್ವಾಧಿಕಾರಿಯ ಆಡಳಿತದ ಬಿಗಿಯು ಸಡಿಲಾಗಿ ಪಾಳಯಗಾರರ ಉಪಟಳವು ಹೆಚ್ಚಿತು. ದೇಶದಲ್ಲಿ ಕ್ಷೋಭೆಯು ಉಂಟಾದುದರಿಂದ ವ್ಯವಸಾಯವೂ ಸಾಧಾರಣ ಕೈಗಾರಿಕೆಗಳೂ ಮುಗ್ಗಿದುವು. ಕತ್ತಿ ಕಠಾರಿಗಳನ್ನು ಮಾಡುವ ಉದ್ಯೋಗವು ಮೇಲ್ಮೆ ಹೊಂದಿತು. ಆಯುಧಗಳೇ ದೇಶದ ಮುಖಚಿಹ್ನಗಳಾಗಿ ಪರಿಣಮಿಸಿದುವು. ವಿವಿಧ ರೀತಿಯ 'ತೆರಿದೊ' (ದೊಣ್ಣೆ ವರಸೆಯ) ಶಾಲೆಗಳು ಹುಟ್ಟಿದವು. ತರುಣರೆಲ್ಲಾ ಅದರ ಉಪಾಸಕರಾದರು.

ಕ್ರಿ. ಶ. ೧೫೪೧ ರಲ್ಲಿ ಕ್ರಿಸ್ತಪಾದರಿಯಾದ ಸೇಂಟ್ ಪ್ರಾನ್ಸಿಸ್ ಕ್ಸೇವೇರ್‌ನು ಜಪಾನಿಗೆ ಬಂದು ಕ್ರಿಸ್ತಮತ ಪ್ರಚಾರ ಕಾರ್ಯಕ್ಕೆ ಉದ್ಯುಕ್ತನಾದನು. ಈ ಪಾದ್ರಿಯು ಇಲ್ಲಿಗೆ ಬರುವ ಮುಂಚೆ ಗೋವೆಯಲ್ಲಿ

ಅನೇಕ ಭಾರತೀಯರನ್ನು ಕ್ರಿಸ್ತರನ್ನಾಗಿ ಮಾಡಿದ್ದನು. ಇದೀಗ ಕ್ರಿಸ್ತ ಮತದ ಮೊದಲ ಪ್ರವೇಶ ಜಪಾನಿನಲ್ಲಿ. 'ಓಕೋಮು' ಮೊದಲಾದ ಪಾಳಯಗಾರರು, ಬೌದ್ಧ ಸಂನ್ಯಾಸಿಗಳು ಅನುಭವಿಸುತ್ತಿದ್ದ ರಾಜಕೀಯ ಅಧಿಕಾರಕ್ಕಾಗಿ ಸಹಿಸದೆ, ತಾವು ಕ್ರಿಸ್ತ ಧರ್ಮವನ್ನವಲಂಬಿಸಿ ಬೌದ್ಧ ಸಂನ್ಯಾಸಿಗಳಿಗೆ ತೊಂದರೆ ಕೊಡತೊಡಗಿದರು. ಕೇವಲ ಮೂವತ್ತು ವರ್ಷಗಳ ಪ್ರಚಾರದಿಂದ ದಕ್ಷಿಣ ಜಪಾನಿನಲ್ಲಿ ೧೫ ಲಕ್ಷ ಜನರು ಕ್ರಿಸ್ತ ಮತಾನುಯಾಯಿಗಳಾದರು. ಇನ್ನೂರು ಚರ್ಚುಗಳು ಕಟ್ಟಿಸಲ್ಪಟ್ಟವು. ಕ್ರಿಸ್ತ ಮಿಶನರಿಗಳು ಅನೇಕ ಶಾಲೆಗಳನ್ನು ತೆರೆದು ಯುರೋಪ್ ಭಾಷೆಗಳನ್ನು ಕಲಿಸುತ್ತಿದ್ದರು.

**(ಉ) ಯೋದೋ ಕಾಲ** (ಕ್ರಿ. ಶ. ೧೬೦೨–೧೮೬೭):—'ಏಹಿಯಾಸು ತೋಕುಗಾವ' ಎಂಬ ಪಾಳಯಗಾರನು 'ಸೇಕಿಗಹರ' ಎಂಬ ಯುದ್ಧದಲ್ಲಿ ಅನೇಕ ಪಾಳಯಗಾರರನ್ನು ಸೋಲಿಸಿ ಇಡಿ ದೇಶಕ್ಕೆ ಸರ್ವಾಧಿಕಾರಿಯಾದನು. ಅಧಿಕಾರದ ಭದ್ರತೆಗಾಗಿ ಏಹಿಯಾಸುವು ಹಳೆಯ ರಾಜಧಾನಿಯಾದ ಕಿಯೊತೋಗೆ ೩೫೦ ಮೈಲುಗಳ ದೂರದಲ್ಲಿ 'ಯೋದೊ' (ಈಗಿನ ಟೋಕಿಯೊ) ಎಂಬ ಹೊಸ ಪಟ್ಟಣವನ್ನು ಕಟ್ಟಿ ರಾಜ್ಯವಾಳಲಾರಂಭಿಸಿದನು. ದೇಶದ ನಾಗುವಳಿ ಭೂಮಿಯು ಇವನ ನಾಲ್ವತ್ತು ಸ್ನೇಹಿತರ ವಶದಲ್ಲಿದ್ದಿತು. ಇವನ ಸರ್ವಾಧಿಕಾರಿತ್ವದಲ್ಲಿ ಶಾಸ್ತ್ರೋಕ್ತವಾದ ಪಾಳಯಗಾರರ ಆಡಳಿತವು ಸ್ಥಾಪಿತವಾಯಿತು. ಇವನ ವಂಶದವರು ಎರಡೂವರೆ ಶತಮಾನ ಕಾಲ ರಾಜ್ಯಭಾರ ನಡೆಯಿಸಿ ಜಪಾನನ್ನು ಊರ್ಜಿತ ಸ್ಥಿತಿಗೆ ತಂದರು. ಪೇಶ್ವೆಗಳು ಮರಾಟ ಅರಸರನ್ನು ಲಕ್ಷಿಸದೆ ಭಾರತದಲ್ಲಿ ರಾಜ್ಯವಾಳಿದ ತೆರದಲ್ಲಿ, ಜಪಾನಿನ ಪೇಶ್ವೆಗಳಾದ ಈ ತೋಕುಗಾವ ವಂಶದವರು ಸನ್ ೧೮೬೭ರ ವರೆಗೆ ಚಕ್ರವರ್ತಿಗಳನ್ನು ಲೆಕ್ಕಿಸದೆ ಆಳಿದರು. ಅಷ್ಟೇ ಏಕೆ, ಹೈದರಲ್ಲಿ ಟೀಪು ಸುಲ್ತಾನರು ಮೈಸೂರರಸರನ್ನು ನಿರ್ಬಂಧದಲ್ಲಿಟ್ಟು ರಾಜ್ಯವಾಳಿದಂತೆ, ತೋಕುಗಾವ ಸರ್ವಾಧಿಕಾರಿಗಳು 'ಮಿಕಡೂ' ಚಕ್ರವರ್ತಿಗಳನ್ನು ಹಳೆಯ ರಾಜಧಾನಿಯಲ್ಲಿ ನಿರ್ಬಂಧವಾಸಕ್ಕೆ ಗುರಿಮಾಡಿ ಅರಸುಗೈಯುತ್ತಿದ್ದರು. ಚಕ್ರವರ್ತಿ

ಗಳು ಸರ್ವಾಧಿಕಾರಿಗಳು ಕೊರೆದ ಗೆರೆಯನ್ನು ದಾಟುತ್ತಿರಲಿಲ್ಲ. ಚಕ್ರವರ್ತಿಯು ವರ್ಷಾದಾಯ ಒಂದು ಲಕ್ಷ ಪಲ್ಲ ಬತ್ತವಿದ್ದರೆ, ಸರ್ವಾಧಿಕಾರಿಯ ವರ್ಷಾದಾಯ ಇದರ ೮೦ ಪಟ್ಟಿತ್ತು. ಸರ್ವಾಧಿಕಾರಿಯು ತನ್ನ ವಂಶದವರ ಪ್ರಭುತ್ವದ ಭದ್ರತೆಗಾಗಿ ಹದಿಮೂರು ಕಾನೂನುಗಳನ್ನು ಮಾಡಿದ್ದನು. ಅವು 'ಕ್ಷತ್ರಿಯ ಶಾಸನ' ಎಂಬುದಾಗಿ ಪ್ರಸಿದ್ಧವಿದ್ದವು. (೧) ಕ್ಷತ್ರಿಯರು ವಿದ್ಯಾವಂತರೂ ಯುದ್ಧಕಲಾವಿಶಾರದರೂ ಇರಬೇಕು. (೨) ಅವರು ಮದ್ಯಪಾನ ಮಾಡಕೂಡದು; (೩) ಅಪರಾಧಿಗಳನ್ನು ರಕ್ಷಿಸುವ ಗೊಡವೆಗೆ ಹೋಗಕೂಡದು; (೪) ಪ್ರಾಣಘಾತಕರು ಮತ್ತು ದೇಶದ್ರೋಹಿಗಳು ಗಡಿಪಾರಿನ ಶಿಕ್ಷೆಗೆ ಗುರಿಯಾಗುವರು; (೫) ಪಾಳಯಗಾರನಿಗೆ (Daimyo-fudal Lord) ಸಂಬಂಧಪಡದ ಪ್ರಜೆಯು ಅವನ ಎಲ್ಲೆಯಲ್ಲಿ ವಾಸಿಸಕೂಡದು; (೬) ಸರ್ವಾಧಿಕಾರಿಯ (Shogunate Generalissimo) ಅಪ್ಪಣೆಯನ್ನು ಪಡೆಯದೆ ಕೋಟೆ ಕೊತ್ತಳಗಳನ್ನು ಸಜ್ಜುಗೊಳಿಸಲಾಗದು; (೭) ಗುಪ್ತವಾಗಿ ಕೋಟೆ ಕೊತ್ತಳಗಳನ್ನು ಕಟ್ಟುವುದನ್ನಾಗಲಿ, ಗುಪ್ತವಾಗಿ ಯಾವುದೇ ರಾಜಕೀಯ ಸಂಸ್ಥೆಯು ಕೆಲಸಮಾಡುತ್ತಿರುವುದನ್ನಾಗಲಿ ತಿಳಿದವರು ಕೂಡಲೆ ಸರ್ವಾಧಿಕಾರಿಗಳಿಗೆ ತಿಳಿಸತಕ್ಕದ್ದು. ತಿಳಿಸದೆ ಮರೆಮಾಚಿದವರು ಮರಣದಂಡನೆಗೆ ಗುರಿಯಾಗುವರು; (೮) ಮದುವೆಗಳು ಗುಪ್ತವಾಗಿ ಆಗಕೂಡದು; (೯) ಸನ್‌ಕಿನ್ ಕೊತಾಯಿಯ ಕಾಯದೆಯ ಮೇರೆಗೆ ಸಕಲ ಪಾಳಯಗಾರರನ್ನು ಎರಡು ಪಂಗಡಗಳಾಗಿ ವಿಭಾಗಿಸಿ, ಒಂದೊಂದು ಪಂಗಡವು ಒಂದೊಂದು ವರ್ಷ (ಪ್ರತಿಯೊಂದು ಪಂಗಡವು ವರ್ಷ ಬಿಟ್ಟು ವರ್ಷ) ಸರ್ವಾಧಿಕಾರಿಯ ರಾಜಧಾನಿಯಲ್ಲಿರತಕ್ಕದ್ದು; ಮತ್ತು ಅವರ ಅವಧಿ ಮುಗಿದ ಬಳಿಕ ತಮ್ಮ ಕುಟುಂಬವನ್ನು ಹೊಣೆಯಾಗಿ ಇಟ್ಟು ತಮ್ಮ ಪೂರ್ವಸ್ಥಳಕ್ಕೆ ಹೋಗತಕ್ಕದ್ದು. Sankinkotai:- according to this article the Lords were divided into two groups and each group was to come up to yeds (present Tokyo) the seat of the shogonate in April every other year to stay there for one

year the shogonates, prepared their yedo residences, where their families were kept as hostages; (೧೦) ಪ್ರತಿಯೊಬ್ಬ ಪ್ರಜೆಯು ನೈಸರ್ಗಿಕ ಸ್ಥಿತಿಗೆ ಅನುಸಾರವಾಗಿ ಉಡುಪನ್ನು ಧರಿಸಬೇಕು; (೧೧) ಊಳಿಗದವರು ಪಲ್ಲಕ್ಕಿಯನ್ನು ಉಪಯೋಗಿಸಕೂಡದು; (೧೨) ಕ್ಷತ್ರಿಯರು ಮಿತವ್ಯಯದ ಜೀವನವನ್ನು ಅಭ್ಯಾಸ ಮಾಡಬೇಕು; (೧೩) ಸರಕಾರಿ ಕೆಲಸಕ್ಕೆ ಜನರನ್ನು ನಿಯಮಿಸುವಾಗ ಪಾಳಯಗಾರರು ತಮ್ಮ ವಿವೇಚನೆಯನ್ನು ಉಪಯೋಗಿಸತಕ್ಕದ್ದು.

ಇಂತಹ ಭದ್ರವಾದ ಆಳಿಕೆಯಿಂದ ಪಾಳಯದೊಳಗೆ ನಡೆಯುತ್ತಿದ್ದ ಕಲಹಗಳು ನಿಂತು ದೇಶದಲ್ಲಿ ಶಾಂತಿಯು ನೆಲೆಗೊಂಡಿತು. ಇದರಿಂದ ಈ ತೋಕುಗಾವ ವಂಶವು ಎರಡು ಶತಮಾನಗಳ ವರೆಗೆ ಬಾಳಿತು.

ಏಹಿಯಾಷಿಯ ಸರ್ವಾಧಿಕಾರಿಯೂ ಜನರನ್ನು ವ್ಯವಸ್ಥೆಯಲ್ಲಿ ಇಡುವುದಕ್ಕಾಗಿ 'ಷಿ-ನೊ-ಕೊ-ಷೋ' ಎಂಬ ನಾಲ್ಕು ಪಂಗಡಗಳನ್ನು ನಿರ್ಮಿಸಿದನು (ಕ್ರಿ. ಶ. ೧೬೩೭). ಕ್ಷತ್ರಿಯ, ವ್ಯವಸಾಯಗಾರ, ಕೈಗಾರಿಕೆಯ ಉದ್ಯೋಗಸ್ಥ ಮತ್ತು ವ್ಯಾಪಾರಸ್ಥ ಎಂಬುವೇ ಅವು. ಹೀಗೆ ಪಂಗಡಗಳನ್ನು ನಿರ್ಮಿಸುವಲ್ಲಿ ಮೂಲಭೂತವಾದ ವಿಚಾರಸರಣಿಯು ಯಾವುದೆಂದರೆ: ಆತನ ದೃಷ್ಟಿಯಲ್ಲಿ, ರಾಜ್ಯವನ್ನು ರಕ್ಷಿಸುವ ಜನರು ಸಮಾಜದಲ್ಲಿ ಪ್ರಥಮ ಸ್ಥಾನವನ್ನು ಪಡೆಯಲು ಯೋಗ್ಯರಾಗಿದ್ದರು; ವ್ಯವಸಾಯದ ಮೂಲಕವಾಗಿ ದೇಶಕ್ಕೆ ಸಹಾಯಮಾಡಬಲ್ಲವರಾದ್ದರಿಂದ ವ್ಯವಸಾಯಗಾರರು ಎರಡನೆಯ ಸ್ಥಾನದಲ್ಲಿ ಕುಳಿತಿದ್ದರು; ಆಯುಧ ಮುಂತಾದ ಸಂಗರದ ಸಲಕರಣೆಗಳನ್ನು ಒದಗಿಸಿಕೊಡುವರಾದುದರಿಂದ ಕೈಗಾರಿಕೆಯವರು ಮೂರನೆಯ ಸ್ಥಾನವನ್ನು ಏರಿದ್ದರು; ದೇಶಕ್ಕೆ ಈ ಬಗೆಯ ಯಾವ ಪ್ರಯೋಜನವೂ ಇಲ್ಲದೆ ಬರಿ ತಮ್ಮ ವ್ಯಾಪಾರದಲ್ಲಿ ತೊಡಗಿರುವುದರಿಂದ ವ್ಯಾಪಾರಸ್ಥರು ಕಡೆಯ ಸ್ಥಾನವನ್ನು ಹೊಂದಿದ್ದರು.

ಒಂದೇ ವಂಶದವರಲ್ಲಿ ನಿರ್ಮಿಸಲ್ಪಟ್ಟ ಈ ಪಂಗಡಗಳು, ಕೆಲವು

ವರ್ಗಗಳಲ್ಲಿಯೇ ಬೇರೆಬೇರೆಯಾಗಿ ಬಿಟ್ಟು, ಒಂದಕ್ಕೊಂದರ ಸಂಪರ್ಕವೂ ತಪ್ಪಿಹೋಯಿತು ಕೀಳು-ಮೇಲೆಂಬ ಭಾವನೆಯು ಸಮಾಜದಲ್ಲಿ ನೆಲೆ ಮಾಡಿತು. ಪಂಗಡ ಪಂಗಡಗಳಲ್ಲಿ ವಿವಾಹ ಸಂಬಂಧವು ಪ್ರತಿಬಂಧ ಮಾಡಲ್ಪಟ್ಟಿತು. ನಿರ್ದಿಷ್ಟವಾದ ಉಡುಪನ್ನೇ ಧರಿಸುತ್ತಿದ್ದುದರಿಂದ ಯಾವ ಪಂಗಡಕ್ಕೆ ಸೇರಿದವನಿವನೆಂಬ ವಿಷಯವು ವ್ಯಕ್ತಿಯನ್ನು ನೋಡಿ ದೊಡನೆಯೇ ಗೊತ್ತಾಗುತ್ತಿದ್ದಿತು. ಕ್ಷತ್ರಿಯರ ಹೊರತು ರೇಸ್ಮೆಯ ಬಟ್ಟೆಗಳನ್ನು ಯಾರೂ ಧರಿಸಕೂಡದೆಂದು ಕಟ್ಟಪ್ಪಣೆಯಿದ್ದಿತು. ಯಾವಾ ಗಲೂ ಕ್ಷತ್ರಿಯರು ಬಳಿಯಲ್ಲಿ ಎರಡು ಕತ್ತಿಗಳನ್ನಿಟ್ಟಿರಬೇಕೆಂದಿದ್ದಿತು. ಇನ್ನಿತರರಿಗಾರಿಗೂ ಆಯುಧಗಳನ್ನು ಧರಿಸಲು ಅಪ್ಪಣೆಯಿದ್ದಿಲ್ಲ. ಈ ರೀತಿಯಾದ ಇನ್ನೂ ಅನೇಕ ಕಟ್ಟು ನಿಯಮಗಳು ಇದ್ದರೂ ಪರಸ್ಪರ ರಲ್ಲಿಯ ಊಟ ಉಪಚಾರಕ್ಕೆ ಯಾವ ಪ್ರತಿಬಂಧವೂ ಇದ್ದಿರಲಿಲ್ಲ. ಈ ಬಗೆಯ ಪಂಗಡಗಳ ಗೊಂದಲದಲ್ಲಿಯೇ ಜಪಾನವು ೧೮೬೭ನೇ ವರುಷದ ವರೆಗೂ ಸಿಕ್ಕುಬಿದ್ದಿದ್ದಿತು.

ತೋಕುಗಾವ ವಂಶಸ್ಥರ ಕಡೆಯ ಆಡಳಿತೆಯಲ್ಲಿ ರಾಜ್ಯದ ಬಿಗುವು ಸಡಿಲಾಯಿತು. ಎಷ್ಟೋ ಪಾಳಯಗಾರರು ಹೆಚ್ಚು ಹೆಚ್ಚಿನ ಅಧಿಕಾರ ವನ್ನು ಪಡೆಯಲು ಹವಣಿಸತೊಡಗಿದರು. ಆರ್ಥಿಕ ದುಸ್ಥಿತಿಯ ಮೂಲಕ ಮಾನಕ್ಕೆ ಮೊದಲಿನವರಾಗಿದ್ದ ಕ್ಷತ್ರಿಯರು ಹಣದಾಸೆಗಾಗಿ ತಮ್ಮ ಮಾನವನ್ನು ಮಾರಿಕೊಳ್ಳಲು ಸಿದ್ಧರಾದರು. ಎರಡು ಕತ್ತಿಗಳನ್ನು ಸೊಂಟದಲ್ಲಿ ಧರಿಸುವುದು ಮೇಲಾದ ಮಾನವೆಂದೆನಿಸುತ್ತಿದ್ದುದರಿಂದ, ರೈತರೂ ವ್ಯಾಪಾರಸ್ಥರೂ ಕ್ಷತ್ರಿಯರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಅವುಗಳನ್ನು ಕೊಂಡು ತರಿಸತೊಡಗಿದರು. ಹಲಕೆಲವು ಕ್ಷತ್ರಿಯರಂತೂ ಧನದ ದಾಹದಿಂದ ವ್ಯಾಪಾರಸ್ಥರ ಕನ್ಯೆಯರನ್ನು ಮದುವೆಯಾಗತೊಡಗಿದರು. ಕ್ಷತ್ರಿಯರನ್ನು ಅಳಿಯಂದಿರನ್ನಾಗಿ ಮಾಡಿಕೊಳ್ಳುವುದರಿಂದ ಸಮಾಜದಲ್ಲಿ ತಾವು ಮೇಲಿನ ಮೆಟ್ಟಲನ್ನೇರುವೆ ವೆಂಬ ಭಾವನೆಯೂ ವ್ಯಾಪಾರಸ್ಥರಲ್ಲಿ ಬೆಳೆಯಲಾರಂಭಿಸಿತು. ಆದ ರಿಂ ದಲೇ ಬೇಡಿದಷ್ಟು ವರದಕ್ಷಿಣೆಯನ್ನೂ ಕೊಡಲು ಅವರು ಸಿದ್ಧರಾದರು.

ಪಾಳಯಗಾರರು ಕೂಡ ಸರ್ವಾಧಿಕಾರಿಯ ಕಿರುಕುಳಕ್ಕೆ ಸಿಕ್ಕುಬಿದ್ದು, ತಕ್ಕಷ್ಟು ಹಣವನ್ನು ಗಳಿಸಿಕೊಳ್ಳದೆ, ತಮ್ಮ ದರ್ಪವನ್ನುಳಿಸಿಕೊಳ್ಳುವುದು ಅಸಾಧ್ಯವೆಂದು ವ್ಯಾಪಾರಸ್ಥರಿಂದ ಸಾಲವನ್ನು ಪಡೆಯತೊಡಗಿದರು. ಸಾಲದ ಹಂಗಿನಿಂದ ಅವರು ಕೀಳುತರಗತಿಯ ವ್ಯಾಪಾರಸ್ಥರಿಗೂ ಅಪಾತ್ರವಾದಾಗ್ಯೂ ಹೆಚ್ಚಿನ ಮಾನವನ್ನು ಕೊಡಬೇಕಾಯಿತು. ಹೀಗಾಗಿ ಕ್ರಿ. ಶ. ೧೭೦೦ನೇ ಇಸ್ವಿಯ ವೇಳೆಗೆ ಕೆಲವು ವ್ಯಾಪಾರಸ್ಥರು ಹಣದ ದರ್ಪದಿಂದ ಪಾಳಯಗಾರರ ದರ್ಪಕ್ಕೆ ಕುಂದನ್ನು ತಂದರು. ಮತ್ತು ಹಣದ ಆಶೆಗಾಗಿ ಎಷ್ಟೋ ಕ್ಷತ್ರಿಯರು ಸಾಹುಕಾರರ ಊಳಿಗದಲ್ಲಿ ಸೇರಿಕೊಂಡು ಅವರ ರಾಜಕೀಯ ದರ್ಪವನ್ನು ಹೆಚ್ಚಿಸಿದರು. ಈ ಬಗೆಯ ಬದಲಾವಣೆಗಳು ಸಮಾಜದಲ್ಲಿ ಭರದಿಂದ ಸಾಗಿಬರುತ್ತಿದ್ದರೂ ಅವುಗಳಿಗೆ ತಡೆಯಿಕ್ಕಲಾರದಷ್ಟು ಸರ್ವಾಧಿಕಾರಿಯು ಬಲಹೀನನಾಗಿಬಿಟ್ಟಿದ್ದನು. ಈ ರೀತಿಯಾಗಿ ಸರ್ವಾಧಿಕಾರಿಯ ಹಿರಿಯರು ವಿರಚಿಸಿದ ಸಮಾಜದ ಕಟ್ಟು ಆರ್ಥಿಕ ದುಸ್ಥಿತಿಯಿಂದ ಕಳಚಿ ಸಡಿಲಾಗಿಹೋಯಿತು.

ವ್ಯವಸಾಯಗಾರರು ಕೂಡ ಶಕ್ತಿಮೀರಿ ಕಂದಾಯವನ್ನು ಸಲ್ಲಿಸುತ್ತಿದ್ದರು. ಆದರೆ ಸರ್ವಾಧಿಕಾರಿಯ ದುಂದುಗಾರಿಕೆಯ ವೆಚ್ಚವನ್ನು ಪೂರೈಸಿಕೊಡುವುದೆಂತು? ಮಿತಿಮೀರಿದ ಕಂದಾಯವನ್ನು ತೆತ್ತಲಾರದೆ ಎಷ್ಟೋ ರೈತರು ಸರಕಾರದ ವಿರುದ್ಧವಾಗಿ ಬಂಡು ಹೂಡಿದರು.

ಕಡೆಗೆ ಕ್ರಿ. ಶ. ೧೮೬೭ರಲ್ಲಿ ಶೋಕುಗಾವ ಸರ್ವಾಧಿಕಾರಿಯ ಆಡಳಿತವು ತಪ್ಪಿ, **ಮೇಜಿ ಚಕ್ರವರ್ತಿಗಳು** ರಾಜ್ಯವನ್ನು ಕೈವಶಮಾಡಿಕೊಂಡರು. ಹೀಗೆ ರಾಜ್ಯಭಾರವನ್ನು ನೇರವಾಗಿ ಕೈಗೊಳ್ಳಲು ಬಲವುಳ್ಳವರಾಗಲಿಕ್ಕೆ ಅವರಿಗೆ ಒಂದು ಸಾವಿರ ವರ್ಷಗಳು ಬೇಕಾದುವು. ಪಟ್ಟವನ್ನು ಏರಿದ ಕೂಡಲೆ ಚಕ್ರವರ್ತಿಗಳು ದೇಶದ ಒಗ್ಗಟ್ಟಿಗಾಗಿಯೂ ಏಳ್ಗೆಗಾಗಿಯೂ ಪಂಗಡಗಳ ಪದ್ಧತಿಯನ್ನು ಮೊದಲು ಕಿತ್ತಿಹಾಕಿದರು. ಈ ಪದ್ಧತಿಯು ಮಾಯವಾದ ೭೦ ವರ್ಷಗಳಲ್ಲಿಯೆ ಜಪಾನ ದೇಶವು ನಾನಾಮುಖದಿಂದ ಉನ್ನತಿ ಶಿಖರಕ್ಕೆ ಪುಟನೆಗೆಯುತ್ತಲೇ ಇದೆ. ಇಂದು (೧೯೩೮ರಲ್ಲಿ) ಯಾವ ಜಪಾನಿಯ ಯುವಕನೇ ಆಗಲಿ, ತಾನು ಪ್ರೀತಿಸುವ

ಯಾವ ಯುವತಿಯನ್ನೂ ಮದುವೆಯಾಗಲಿಕ್ಕೆ ಸಮಾಜದ ಅನುಮತಿ ಯಿದೆ. **ಕ್ಷತ್ರಿಯರಿಗಷ್ಟೇ ಪೂರ್ವದಲ್ಲಿ ಮೀಸಲಾಗಿಟ್ಟ ರಾಜ್ಯರಕ್ಷ ಣದ ಹೊಣೆಯನ್ನು ಇಂದಿನ ಪ್ರತಿಯೊಬ್ಬ ಇಪ್ಪತ್ತು ವಯಸ್ಸಿಗೆ ಮೇಲ್ಪಟ್ಟ ಜಪಾನದ ಯುವಕನು ಹೊರಲೇಬೇಕೆಂಬ ಕಟ್ಟೆಪ್ಪಣೆಯು ಕಟ್ಟಳೆಯು ರೂಢಿಗೆ ಬಂದಿದೆ.** ದೇಶವು ಕೈಗಾರಿಕೆ ಮತ್ತು ವಾಣಿಜ್ಯ ದಲ್ಲಿ ಮುಂದುವರಿದಂತೆಲ್ಲ ವರ್ತಕರು ಮತ್ತು ಹಣವಂದಿಗರು ಹೆಚ್ಚಿನ ಮನ್ನಣೆಯನ್ನು ಹೊಂದಲು ತಕ್ಕವರಾಗಿರುವರು. ಈಗ ಇಡಿ ಜನಾಂ ಗವೇ ಒಂದೇ ಬಗೆಯ ಉಡುಪನ್ನು ಧರಿಸುತ್ತಿರುವುದರಿಂದ, ಬಲ್ಲಿದರು ಬಡವರೆಂದು ಗುರ್ತಿಸುವುದೇ ಅಸಾಧ್ಯವಾಗಿದೆ. ಪಾಶ್ಚಿಮಾತ್ಯ ನಾಗರಿ ಕತೆಯು ನುಗ್ಗಿದ ಮೇಲಂತೂ ಅಗಸ, ಕುಂಬಾರ ಮುಂತಾಗಿ ಸರಕಾ ರದ ಶ್ರೇಷ್ಠ ಅಧಿಕಾರಿಯ ವರೆಗೂ ಪ್ರತಿಯೊಬ್ಬನೂ ಯುರೋಪದ ತರಹದ ಉಡಿಗೆಯನ್ನೇ ಉಡುತ್ತಿರುವುದರಿಂದ, ಉಪಹಾರ—ಊಟದ ಅಂಗಡಿಗಳಲ್ಲಿ ಎಲ್ಲರೂ ಸಮಾನವಾಗಿ ಗಣಿಸಲ್ಪಡುವರು. ಅನೇಕ ಸಿನೇಮಾ ನಾಟಕ ಮಂದಿರಗಳಲ್ಲಿ ತಿಕೀಟುಗಳಿಗೆ ಒಂದೇ ಬೆಲೆಯಿರುವುದ ರಿಂದ, ಮೂವತ್ತು ರೂಪಾಯಿ ಸಂಬಳದವನೂ ಮೂವತ್ತು ಕೋಟಿಯ ಮಹಂತನ ಸಂಗಡ ಕುಳಿತುಕೊಳ್ಳುವ ಏರ್ಪಾಡು ಅಲ್ಲಿದೆ. ಒಟ್ಟಾರೆ ಯಾಗಿ ಉಡುಪಿನ ಮೇಲಿಂದ ಯಾರು ಯಾರೆಂಬುದು ಗೊತ್ತಾಗುವಂ ತಿಲ್ಲ. ಸ್ತ್ರೀ-ಪುರುಷರೆಂಬುದಷ್ಟೇ ಅದರಿಂದ ಗೊತ್ತಾಗಬಹುದು. **ಸರಕಾ ರದ ಅಧಿಕಾರಕ್ಕೆ ಯೋಗ್ಯತೆಯೇ ಒರೆಗಲ್ಲಲ್ಲದೆ, ಹಣ ವಂಶಗಳಾ ವುವೂ ಅಲ್ಲ.** ಇಂದಿನ **ಪರದೇಶೀಯ ಮಂತ್ರಿಗಳಾದ ಮ. ರಾ. ಹಿರೋಕೆರವರು** ಕಲ್ಲುಕುಟಿಗರ ಕುಲದವರು. ಇಂದಿಗೂ ಅವರ ತಂದೆ ತಾಯಿ ಬಂಧು-ಬಳಗದವರೆಲ್ಲ ಅದೇ ಉದ್ಯೋಗವನ್ನೆ ಸಾಗಿಸುತ್ತಿದ್ದಾರೆ. ಇದಾವುದೂ ಅವರು ಮಂತ್ರಿಪದವನ್ನೇರಲು ಅಡ್ಡಬರಲಿಲ್ಲ.

ಜಪಾನವು ಕೂಡ ನಮ್ಮ ಭಾರತದಂತೆ, ಬ್ರಾಹ್ಮಣ—ವೈಶ್ಯ-ಶೂದ್ರ ಮುಂತಾದ ಪಂಗಡಗಳ ತೊಡಕಿನಲ್ಲಿ ಎಪ್ಪತ್ತು ವರ್ಷಗಳ ಹಿಂದೆ ಸಿಕ್ಕು ಬಿದ್ದು ಅಧೋಗತಿಗೆ ಇಳಿಯುವಂತಾಗಿದ್ದಿತು. ಆದರೆ ಅವುಗಳ ನಿರ್ಮೂ

ಲನದಲ್ಲಿಯೇ ಕಲ್ಯಾಣವಿದೆಯೆಂಬುದನ್ನು ಕಂಡುಕೊಂಡು, ಅದು ಅವು ಗಳಿಗೆ ತಿಲಾಂಜಲಿಯನ್ನು ಕೊಟ್ಟಿದ್ದುದರ ಪರಿಣಾಮವಾಗಿ ಈಗ ಪ್ರಗತಿ ಮಂದಿರದ ಕಳಸವನ್ನೇ ಏರುತ್ತಲಿದೆ. ಇಂತಹ ರನ್ನನ್ನಡಿಯಂತಹ ಉದಾಹರಣೆಯು ನಮ್ಮ ಭಾರತೀಯರ ಮುಂದೆ ಇರುವಾಗ, ಅದನ್ನು ಅನುಕರಿಸುವ ಭಾಗ್ಯವು ಅವರಿಗೆ ಎಂದೋ ಏನೋ! ಭಾರತೀಯ ಯುವಕರಾದ ನಾವು ನಮ್ಮ ಕಲ್ಯಾಣಕ್ಕೆಂದು ಸೊಂಟಕಟ್ಟಿ ನಿಂತು ಪ್ರಯತ್ನಿಸಬೇಕು. ನಮ್ಮ ಹಿರಿಯರು ಸಮಾಜಸುಧಾರಣೆಗೆ ಸಮ್ಮತಿ ಯನ್ನು ಕೊಡಲಿ, ಕೊಡದಿರಲಿ, ನಾವೇ ಆ ಕಾರ್ಯದ ಭಾರವನ್ನು ಹೊರಬೇಕು. ಯುವಕರಲ್ಲದೆ ಮುದುಕರು ದೇಶಕ್ಕಾಗಿ ದುಡಿಯ ಬಲ್ಲರೆ?

---

# ೪. ಪರದೇಶೀಯರ ಸಂಬಂಧ, ರಾಜ್ಯದ ಪುನಃಸ್ಥಾಪನೆ



ಇಂದು, ಇಡೀ ಪ್ರಪಂಚದ ಕಣ್ಣನ್ನು ಕುಕ್ಕಿಸುತ್ತ, ಪ್ರಖ್ಯಾತಿಯನ್ನು ಪಡೆದಿರುವ ಜಪಾನಿನ ಅಂಕಿತನಾಮವು ಪೂರ್ವದಲ್ಲಿ **ನಿಪ್ಪೊ** ಎಂದಿದ್ದಿತು. 'ಜಪಾನ' ಇದು ಇತ್ತೀಚೆಗೆ ಬಂದ ಹೆಸರು. 'ನಿಪ್ಪೊ' ಎಂದರೆ ಸೂರ್ಯದೇಶವು. ಇಂದಿಗೂ ಜಪಾನಿಗಳು ತಮ್ಮ ದೇಶವನ್ನು ಅದೇ ಹೆಸರಿನಿಂದ ಕರೆಯುತ್ತಾರೆ. ಹನ್ನೊಂದನೆಯ ಶತಮಾನದಲ್ಲಿ ಚೀನದೇಶಕ್ಕೆ ಬಂದ **ಮಾರ್ಕೋಪೋಲನು** ನಿಪ್ಪೊ ದ್ವೀಪಕ್ಕೆ ಬರಲೂ ಯತ್ನಿಸಿದನು. ಆದರೆ ಅದು ಸಾಧ್ಯವಾಗದೆ ಅದು ಬರಿ ಅವನ ಡಾಯರಿಗೆ ಮಾತ್ರ ವಿಷಯವಾಯಿತು. ತನ್ನ ದೇಶಕ್ಕೆ ಹೋದಮೇಲೆ ಅವನು ಅದನ್ನು ಪ್ರಸಿದ್ಧಪಡಿಸಿದನು. ಇದರ ಆಧಾರದ ಮೇಲಿಂದಲೇ ಮುಂದೆ ೧೬ನೆಯ ಶತಮಾನದಲ್ಲಿ **ಪೋರ್ತುಗೀಸರು** ನಿಪ್ಪೊ ದ್ವೀಪಕ್ಕೆ ಬಂದು ಇದನ್ನು **ಜಪಾನ**ವೆಂದು ಕರೆದರು. ಆಗಿನಿಂದ ಜಪಾನವೆಂಬ ಹೆಸರಿನಿಂದಲೇ ಈ ದೇಶವು ಪ್ರಸಿದ್ಧಿಯನ್ನು ಪಡೆಯುತ್ತ ಬರುತ್ತಲಿದೆ.

ಜಪಾನದೊಡನೆ ಸಂಬಂಧ ಬೆಳೆಸಿದವರಲ್ಲಿ ಮೊದಲಿನವರೆಂದರೆ, ಚೀನೀಯರು ಮತ್ತು ಕೋರಿಯಾದವರು. ಇವರ ಸಂಪರ್ಕದಿಂದಲೇ ಜಪಾನಿಗಳು ಅನಾಗರಿಕತೆಯ ದಶೆಯಿಂದ ನಾಗರಿಕತೆಯ ದಶೆಯನ್ನು ತಾಳಿದರು. ಈ ದೇಶಕ್ಕೆ ಬೌದ್ಧ ಧರ್ಮವು ಬಂದಮೇಲಂತೂ ಚೀನೀಯರೊಡನೆ ಇವರ ಬಳಕೆಯು ಹೆಚ್ಚಾಯಿತು. ಚೀನೀಯರು ಇಂದಿನ ವರೆಗೆ ಜಪಾನಿಗಳ ಮೇಲೆ ದಂಡೆತ್ತಿ ಬರುವ ಸಾಹಸಕ್ಕೆ ಬಿದ್ದಿಲ್ಲ. ಹದಿಮೂರನೇ ಶತಮಾನದಲ್ಲಿ **ಕಾಬಲಿಖಾನನು** ಮೊದಲನೆಯ ಸಾರೆ ಜಪಾನದ ಮೇಲೆ ದಾಳಿಯಿಟ್ಟನು. ಆದರೆ ಕಾಳಗದಲ್ಲಿ ಗೆಲುವು ಸಿಗದೆ ಕಾಲಿಗೆ

ಬುದ್ಧೀ ಹೇಳಿದನು. ಅಂದಿನಿಂದ ಇಂದಿನ ವರೆಗೆ ಯಾವ ಪರದೇಶೀಯನೂ ಈ ದೇಶಕ್ಕೆ ನೇರವಾಗಿ ದಂಡೆತ್ತಿ ಬಂದುದಿಲ್ಲ. ಜಪಾನದ ಸರ್ವಾಧಿಕಾರಿಯಾದ ಕೋಯೋಕೋಮಿಯ ಅಪ್ಪಣೆಯಂತೆ ಒಂದು ಸಾರೆ ಜಪಾನೀ ಸೈನ್ಯವೂ ಕ್ರಿ. ಶ. ೧೫೯೨ರಲ್ಲಿ ಕೋರಿಯಾದ ಮೇಲೆ ದಾಳಿಯನ್ನು ಮಾಡಿತು. ಆದರೆ ಸರ್ವಾಧಿಕಾರಿಯು ಮರಣದಿಂದ ಅದು ತಿರುಗಿ ಬರಬೇಕಾಯಿತು.

**ಕ್ರಿಸ್ತ ಪಾದರಿಗಳ ಪ್ರವೇಶ ಮತ್ತು ಅವರು ಅನುಭವಿಸಿದ ಯಾತನೆ**—ಕ್ರಿ. ಶ. ೧೫೪೨ರಲ್ಲಿ ಎಲ್ಲಕ್ಕೂ ಮುಂಚೆ ಪಾಶ್ಚಿಮಾತ್ಯರಲ್ಲಿ ಪೋರ್ತುಗೀಸರು ವ್ಯಾಪಾರಕ್ಕಾಗಿ ಇಲ್ಲಿ ಕಾಲಿಟ್ಟರು. ವ್ಯಾಪಾರ ಯೋಗದಿಂದ ಇಲ್ಲಿಯ ರೇಶ್ಮೆಯ ಪರಿಚಯವು ಪಾಶ್ಚಾತ್ಯರಿಗಾಯಿತು. ಅವರೇ ಮೊಟ್ಟಮೊದಲು ಇಲ್ಲಿಗೆ ಹೊಗೆಸೊಪ್ಪು, ಮದ್ದು—ಗುಂಡುಗಳನ್ನು (fire arms) ತಂದವರು. ಪೋರ್ತುಗೀಸರು ಬರಿ ವ್ಯಾಪಾರದಿಂದಲೇ ಸುಮ್ಮನಿರದೆ ಧರ್ಮಪರಿವರ್ತನೆಯನ್ನೂ ಅವರು ಆರಂಭಿಸಿದರು; ಇದೇ ಸಮಯಕ್ಕೆ ಭಾರತದಲ್ಲಿ ಪಾದರಿಯ ಕೆಲಸವನ್ನು ಮಾಡುತ್ತಿದ್ದ **ಫ್ರಾನ್ಸಿಸ್ ಝೆವಿಯರ**ನನ್ನು ಕ್ರಿಸ್ತಧರ್ಮ ಪ್ರಸಾರಕ್ಕೆಂದು ಅವರು ಬರಮಾಡಿಕೊಂಡರು. ಇವನು ಜಪಾನದ ದಕ್ಷಿಣ ದ್ವೀಪವಾದ **ಕ್ಯೊಷುವಿ**ನಲ್ಲಿ ವಾಸವಾಗಿದ್ದು ಅನೇಕ ದೇಶೀಯರನ್ನು ಕ್ರಿಸ್ತರನ್ನಾಗಿ ಮಾಡಿದನು. ಪಾದರಿಗಳು ಆಡುತ್ತಿದ್ದ ಬೆಡಗಿನ ಸವಿಮಾತುಗಳಿಗೆ ಮರುಳಾಗಿ ಮುಂಚೆ ಹದಿನೈದು ಲಕ್ಷ ಜನರು ಕ್ರಿಸ್ತಧರ್ಮಿಗಳಾದರು. **ಝೆವಿಯರ**ನ ಅಪ್ಪಣೆಯಂತೆ ಒಬ್ಬ ಜಪಾನಿ ಕ್ರಿಸ್ತಧರ್ಮಿಯು ಗೋವಾ ಪ್ರಾಂತಕ್ಕೂ ಮತ್ತೊಬ್ಬನು ಪೋಪನನ್ನು ಕಾಣಲು ರೋಮ ಪಟ್ಟಣಕ್ಕೂ ಹೊರಟವರು ಮರಳಿ ಸ್ವದೇಶಕ್ಕೆ ಬರದೆ ಅಲ್ಲಲ್ಲಿಯೇ ಕಾಲವಶರಾದರು.

ಮೊದಮೊದಲು ಪಾಳಯಗಾರರು ಪಾದರಿಗಳ ಮತ್ತು ಕ್ರಿಸ್ತಧರ್ಮದ ವಿಷಯವಾಗಿ ಯಾವ ಬಗೆಯ ಸಂಶಯಗಳನ್ನೂ ತಕ್ಕೊಳ್ಳಲಿಲ್ಲ. ಆದ್ದರಿಂದ ಸಾಧ್ಯವಿರುವಲ್ಲೆಲ್ಲ ಕ್ರಿಸ್ತಧರ್ಮಕ್ಕೆ ಭಕ್ತರು ಕೂಡುತ್ತಿದ್ದರು.

**ನೊಬುನಾಗ**ನೆಂಬ ಪಾಳಯಗಾರನು ಪೋಪನ ಬಳಿಗೆ ತನ್ನ ರಾಯಭಾರಿಯನ್ನೂ ಕಳುಹಿದನು. ಮುಂದೆ ಕ್ರಿ. ಶ. ೧೫೮೪ರಲ್ಲಿ ವ್ಯಾಪಾರಕ್ಕೆಂದು ಬಂದ ಸ್ಪೇನ ದೇಶದವರೂ ತಮ್ಮ ಪಾದರಿಗಳ ದ್ವಾರವಾಗಿ ಧರ್ಮಾಂತರದ ಕಾರ್ಯವನ್ನು ಆರಂಭಿಸಿದರು. ಇದರಿಂದ ಪೋರ್ತುಗೀಸ-ಸ್ಪೇನದವರ ನಡುವೆ ಕಲಹವು ಹುಟ್ಟಲಿಕ್ಕೆ ಕಾರಣವಾಯಿತು. ಧರ್ಮಾಂತರ ಮಾಡುವ ಅಧಿಕಾರವು ಕಡೆಗೆ ಪೋಪನಿಂದ ಸ್ಪೇನದವರಿಗೆ ದೊರೆಯಿತು. ಆದರೂ ಒಳಜಗಳವು ನಡೆದೇ ಇದ್ದಿತು. ರಾಯಭಾರಿಗಳೆಂದು ಬಂದು ಪಾದರಿಯ ಕೆಲಸವರನ್ನು ಪೋರ್ತುಗೀಸರು ನಡೆಸಿದರು. ಏಸುಕ್ರಿಸ್ತನ ಹೆಸರಿನಿಂದ ದೇಶೀಯರನ್ನು ಕ್ರಿಸ್ತರನ್ನಾಗಿ ಮಾಡಬಂದ ಆ ಪಾಶ್ಚಿಮಾತ್ಯರೊಳಗಿನ ಕಲಹವು ವಿಕೋಪಕ್ಕೆ ಮುಟ್ಟಿ, ರಕ್ತಪಾತವೂ ನಡೆಯಲಾರಂಭಿಸಿತು. ಈ ರೀತಿಯ ಬಿಳಿ ಜನಾಂಗದವರ ನಡುವೆ ನಡೆದ ರಕ್ತಪಾತವು ದೇಶೀಯರ ಮನವನ್ನು ಕುಲುಕಿಸಿತು. ‘ಸ್ಪೇನ್ ಚಕ್ರವರ್ತಿಯು ಪಾದರಿಗಳ ಮುಖಾಂತರವಾಗಿ ದೇಶೀಯರನ್ನು ಕ್ರಿಶ್ಚಿಯನರನ್ನು ಮಾಡುವ ಕಾರ್ಯವನ್ನು ಮುಂದೆ ಮಾಡಿ, ಹಿಂದಿನಿಂದ ದಂಡನ್ನು ಕಳುಹಿ ದೇಶವನ್ನು ಗೆಲ್ಲುವ ಹವಣಿಕೆಯಲ್ಲಿದ್ದಾನೆ.’ ಎಂಬ ಸುದ್ದಿಯೂ ಸರ್ವಾಧಿಕಾರಿಗೆ ಒಬ್ಬ ಸ್ಪೇನ ನಾವಿಕನಿಂದ ತಿಳಿದು ಅವನಲ್ಲಿ ಬಲು ದಿಗಿಲನ್ನು ಹುಟ್ಟಿಸಿತು. (An indiscrect remark by a spanish sea-captain, that his master accomplished foreign conquests by just sending priests to win the people and then getting possession of the country through native Christians.) ಆಗ ಕ್ರಿ. ಶ. ೧೫೮೭ ರಲ್ಲಿ ಸರ್ವಾಧಿಕಾರಿಯಾದ **ಹಿಡಿಯೋಷಿ**ಯು ಸ್ಪೇನದವರ ಪಾದರಿಗಳನ್ನು ಆ ಕೂಡಲೆ ದೇಶದಿಂದ ಓಡಿಸಲ್ಪಟ್ಟನು; ಅಲ್ಲದೆ ಆ ದೇಶದ ವ್ಯಾಪಾರಸ್ಥರಿಗೂ ಚಿತ್ರಹಿಂಸೆಗಳನ್ನು ಕೊಡಲು ಮೊದಲುಮಾಡಿ ಅವರು ಜಪಾನದೊಡನೆ ವ್ಯಾಪಾರವನ್ನೇ ಸಾಗಿಸದಂತೆ ಮಾಡಿದನು. ಪಾದರಿಗಳ ವಿರುದ್ಧವಾಗಿ ಮಾಡಿದ ಕಡುತರವಾದ ಇನ್ನೂ ಬೇರೆ ಅನೇಕ ಕಟ್ಟಳೆಗಳಿಂದ ಪರದೇಶದ ಪಾದರಿಗಳು ಪ್ರಕೋಪಗೊಂಡರು; ಕಡೆಗೆ ದೇಶೀಯ ಕ್ರಿಶ್ಚಿಯನ್ನ

ರನ್ನು ಸೇರಿಸಿಕೊಂಡು ಸರ್ವಾಧಿಕಾರಿಯ ವಿರುದ್ಧವಾಗಿ ಬಂಡಾಯ ವನ್ನೂ ಎಬ್ಬಿಸಿದರು. ಇದರಿಂದಂತೂ ಸರ್ವಾಧಿಕಾರಿಯು ತಲೆತಿರುಗಿತು. ಆತನು ೨೬ ಜನ ಪಾದರಿಗಳನ್ನು ಶೂಲಕ್ಕೇ ಏರಿಸಿಬಿಟ್ಟನು. ಈ ಸುದ್ದಿ ಪೋಪನಿಗೆ (Pope Urvan VIII) ತಿಳಿದು, ಶೂಲಕ್ಕೆ ಹಾಕಲಾದ ವರು ಶಾಸ್ತ್ರೀಯವಾಗಿ ಸತ್ಪುರೆಂದು (canonised) ಪರಿಗಣಿಸಲ್ಪಡ ಲಿಕ್ಕೆ ೩೦ ವರ್ಷಗಳು ಬೇಕಾದುವು.

ಕ್ರಿ. ಶ. ೧೬೦೦ರಲ್ಲಿ ಡಚ್ಚರ ಹಡಗದ ಸಂಗಡ, **ವಿಲ್ ಅಡಾನು** ನೆಂಬ ಇಂಗ್ಲಿಷ ಮನುಷ್ಯನು ಮೊದಲ ಸಲ ಜಪಾನಿಗೆ ಬಂದನು. ಈತನು ಹಡಗುಗಳನ್ನು ಕಟ್ಟುವುದರಲ್ಲಿ ಬಲು ನಿಪುಣನಾಗಿದ್ದನು. ಆದ್ದರಿಂದ ಆಗಿನ ಸರ್ವಾಧಿಕಾರಿಯಾದ **ಇಹೇಯೋಶಿಯು** ಆವನಿಗೆ ತನ್ನ ಆಸ್ಥಾನ ದಲ್ಲಿ ತಕ್ಕ ಅಧಿಕಾರವನ್ನು ಕೊಟ್ಟು, ಆದರವಿಂದ ಗೌರವಿಸಿದನು. ಆ ವಿಲ್ ಅಡಾಮನು ಒಬ್ಬ ಉತ್ತಮ ಕ್ಷತ್ರಿಯನ ಮಗಳನ್ನು ಮದುವೆಯಾಗಿ ಆನಂದದಿಂದ ಅಲ್ಲಿ ಕಾಲವನ್ನು ಕಳೆಯಲಾರಂಭಿಸಿದನು.

ಕ್ರಿ. ಶ. ೧೬೧೩ರಲ್ಲಿ ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿಯ **ಕ್ಲಿಫು** ಎಂಬ ಹಡಗವು ಜಪಾನದ **ಹಿರೋಡೊ** ಎಂಬ ರೇವು ಪಟ್ಟಣಕ್ಕೆ ಬಂದು ತಲುಪಿತು. ಅದರ ಕಪ್ತಾನನು ವಿಲ್ ಆಡಾಮನ ಸಹಾಯದಿಂದ ಜಪಾನ ಸರ್ಕಾರದೊಡನೆ ವ್ಯಾಪಾರದ ಒಪ್ಪಂದವನ್ನು ಮಾಡಿಕೊಂಡನು. ಹಿರೋಡೋವಿನಲ್ಲಿ ಇಂಗ್ಲಿಷರು ಒಂದು ಕಾರಖಾನೆಯನ್ನು ಕಟ್ಟಿಕೊಂಡು ವ್ಯಾಪಾರವನ್ನು ಆರಂಭಿಸಿದರು. ಆದರೆ ಅವರ ಆಟವು ಬಹುದಿನ ನಡೆಯ ಲಿಲ್ಲ. ದೇಶೀಯರ ಕಿರಿಕುಳದಿಂದಲೂ ಪರದೇಶೀಯರ ಹೊಟ್ಟೆಕಿಚ್ಚಿನಿಂ ದಲೂ ಅದು ಮುಚ್ಚಲ್ಪಟ್ಟಿತು. ಅದರಲ್ಲಿ ತೋಕುಗಾದ ಆಗಿನ ಸರ್ವಾಧಿಕಾರಿಯು ಬಿಳಿ ಜನಾಂಗದವರು ತನ್ನ ದೇಶದೊಳಕ್ಕೆ ಬರಲೇ ಕೂಡದೆಂದು ಕಟ್ಟಳೆಯನ್ನೇ ವಿಧಿಸಿಬಿಟ್ಟನು. ಆದುದರಿಂದ ೧೬೧೫ ರಿಂದ ೧೮೫೬ರ ವರೆಗೆ ಇಂಗ್ಲಿಷರಿಗೆ ಜಪಾನದಲ್ಲಿ ಮತ್ತೆ ಕಾಲಿಡಲಿಕ್ಕೇ ಸಾಧ್ಯ ವಾಗಲಿಲ್ಲ.

ಕ್ರಿ. ಶ. ೧೬೨೨ ರಲ್ಲಿ ನಾಗಾಸಾಕಿಯೆಂಬ ರೇವು ಪಟ್ಟಣದಲ್ಲಿ

ದೇಶೀಯ ಕ್ರಿಶ್ಚಿಯನರು ರಾಜಕೀಯ ವಿಚಾರದಲ್ಲಿ ಸರ್ವಾಧಿಕಾರಿಯ ಮಾತನ್ನು ತಿರಸ್ಕರಿಸಿ ನಿಂತರು. ಇದರಿಂದ ಆತನು ಬಲು ಕೋಪಗೊಂಡನು. ಆಗಲೇ ಅವನು ೬ ಜನ ಬಿಳಿ ಪಾದರಿಗಳನ್ನೂ ೨೦ ಜನ ದೇಶೀಯ ಪಾದರಿಗಳನ್ನೂ ಜೀವಸಹಿತವಾಗಿ ಸುಲಿಸಿದುದಲ್ಲದೆ, ಸಾವಿರಾರು ದೇಶೀಯ ಕ್ರಿಶ್ಚಿಯನರನ್ನು ಕೊಲ್ಲಿಸಿಬಿಟ್ಟನು; ಉಳಿದವರಿಗೆ ಕ್ರಿಸ್ತ ಧರ್ಮವನ್ನು ಬಿಟ್ಟುಬಿಡಲು ಕಟ್ಟಪ್ಪಣೆಯನ್ನಿತ್ತನು. ಆ ಮತವನ್ನು ಬಿಟ್ಟರೆಂಬುದನ್ನು ಪರೀಕ್ಷಿಸುವುದಕ್ಕೆಂದು ಸರ್ವಾಧಿಕಾರಿಯು ನಡು ಬೀದಿಯಲ್ಲಿ ವರ್ಜಿನ್ ಮೇರಿಯ (Vargin Mary) ಪ್ರತಿಮೆಯನ್ನು ಮಾಡಿಸಿಟ್ಟನು; ಅದನ್ನು ಪ್ರತಿಯೊಬ್ಬರು ತುಳಿಯುತ್ತ ಹೋಗುವಂತೆ ಆಜ್ಞೆಯನ್ನು ಮಾಡಿದನು. ಹಾಗೆ ಆ ಪ್ರತಿಮೆಯನ್ನು ತುಳಿಯಲು ಒಪ್ಪದವರು ದೇಶದ್ರೋಹಿಗಳೆಂದು ಗ್ರಹಿಸಿ, ಶೂಲಕ್ಕೆ ಏರಿಸಲ್ಪಟ್ಟರು. ಇಂತಹ ಚಿತ್ರಹಿಂಸೆಗಳನ್ನು ಅನುಭವಿಸುತ್ತಲೂ ಅನೇಕರು ಕ್ರಿಸ್ತ ಮತಾವಲಂಬಿಗಳಾಗಿದ್ದರು. ಕಡೆಗೆ ಹಿಂಸೆಯ ತಾಪವನ್ನು ತಡೆಯಲಾರದೆ ೩೦ ಸಾವಿರ ದೇಶೀಯ ಕ್ರಿಶ್ಚಿಯನ್ನರು ಸರ್ವಾಧಿಕಾರಿಯ ವಿರುದ್ಧ ಬಂಡೆಬ್ಬಿಸಿದರು. ಎರಡೂವರೆ ತಿಂಗಳು ಯುದ್ಧವು ಸಾಗಿ, ಕಡೆಗೆ ಸರ್ವಾಧಿಕಾರಿಗೇ ಜಯವಾಯಿತು. ಕಾಳಗದಲ್ಲಿ ಸೆರೆಸಿಕ್ಕ ಪ್ರತಿಯೊಬ್ಬ ಕ್ರಿಶ್ಚಿಯನನು ಶೂಲಕ್ಕೇರಿಸಲ್ಪಟ್ಟನು. ಆಮೇಲೆ ಜಪಾನದಲ್ಲಿ ಕ್ರಿಸ್ತಧರ್ಮವು ಉಳಿಯಲಿಲ್ಲ. ಯಾವ ಬಿಳಿಯ ಜನಾಂಗವೂ ವ್ಯಾಪಾರಕ್ಕಾಗಲಿ, ಧರ್ಮಪ್ರಸಾರಕ್ಕಾಗಲಿ ಜಪಾನ ದೇಶಕ್ಕೆ ಬರಕೂಡದೆಂಬ ಕಟ್ಟಪ್ಪಣೆಯ ಕಟ್ಟಳೆಯೂ ಸರ್ವಾಧಿಕಾರಿಯಿಂದ ಬಲವಾಗಿ ರೂಢಿಗೆ ತರಲಾಯಿತು. ಆದರೆ ಡಚ್ಚರು ವ್ಯಾಪಾರದ ಆಸೆಯಿಂದ ಬಂಡಾಯದಲ್ಲಿ ಸರ್ವಾಧಿಕಾರಿಯ ಕಡೆಗಾಗಿ, ಬಿಳಿಯರ ಮೇಲೆ ಗುಂಡಿನ ಸುರಿಮಳೆಯನ್ನು ಕರೆದಿದ್ದುದರಿಂದ, ಅವರಿಗೊಬ್ಬರಿಗೆ ಮಾತ್ರ ಅಲ್ಲಿ ವ್ಯಾಪಾರಕ್ಕೆ ಅಪ್ಪಣೆಯು ದೊರೆಯಿತು. ಆದರೆ, 'ವರ್ಷದಲ್ಲಿ ಒಂದೇ ಅವರ ವ್ಯಾಪಾರದ ಹಡಗವು ಇಲ್ಲಿಗೆ ಬರಬೇಕು; ಬಂದಬಳಿಕ ಅದು ೨೪೦ ಯಾರ್ಡ್ ಅಗಲಿರುವ 'ಕೋಷೀಮ' ಎಂಬ ಸಣ್ಣ ನಡುಗಡ್ಡೆಯಲ್ಲಿಯೇ ಉಳಿಯಬೇಕು; ಅಲ್ಲದೆ ಬೇರೆ ಭಾಗಗಳಲ್ಲಿ ಅದು ಬರಕೂಡದು;' ಎಂಬ

ಶಾಸನವಿದ್ದಿತು. ಅಧಿಕಾರಿಗಳಿಗಷ್ಟೇ ಡಚ್ಚರೊಡನೆ ವ್ಯವಹಾರ ನಡೆಸಲಿಕ್ಕೆ ಸೌಕರ್ಯಗಳಿದ್ದುವು. ಮೇಲ್ವಿಚಾರಕ್ಕೆಂದು ಕೋಷಿಮ ದ್ವೀಪದಲ್ಲಿ ಸರ್ವಾಧಿಕಾರಿಯು ಒಂದು ಸೈನ್ಯವೇ ಇದ್ದಿತು. ಇಷ್ಟು ಅಪಮಾನವನ್ನೂ ಸಹಿಸಿಕೊಂಡು ಡಚ್ಚರು ಜಪಾನರೊಡನೆ ಎರಡು ಶತಮಾನಗಳವರೆಗೆ ವ್ಯಾಪಾರವನ್ನು ಸಾಗಿಸಿಕೊಂಡು ಬಂದರು.

ಹೀಗೆ ಕ್ರಿ. ಶ. ೧೬೩೪ರಿಂದ ೧೮೫೭ರ ವರೆಗೆ ಜಪಾನು ಪರಕೀಯರ ಸಂಪರ್ಕವಿಲ್ಲದೆ ಏಕಾಂತವನ್ನು ಅನುಭವಿಸುತ್ತ ಬಂದಿತು. ಅನೇಕ ಪಾಶ್ಚಿಮಾತ್ಯರು ಈ ತರಹದ ಅದರ ಏಕಾಂತವಾಸದಿಂದ ಅದನ್ನು ಹಿಂದು ಳಿದ ರಾಜ್ಯವೆಂದು ಟೀಕಿಸಿದರು. ಈ ಎರಡೂವರೆ ಶತಮಾನಗಳಲ್ಲಿಯು ಪರದೇಶದ ಸಂಬಂಧದಿಂದ ಜಪಾನದ ಆರ್ಥಿಕ ಸ್ಥಿತಿಯು ಮೇಲ್ತರವಾ ಗುತ್ತಿತ್ತೆಂಬುದೇನೋ ನಿಜ. ಆದರೆ ಅದು ತನ್ನ ದೇಶದ ಕದಗಳನ್ನು ಪರದೇಶದವರಿಗೆ ತೆರೆದುಬಿಟ್ಟಿದ್ದರೆ, ಇತರ ಪೂರ್ವದ ದೇಶಗಳಂತೆ ಅದು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ತುಂಬ ಹೀನಸ್ಥಿತಿಗೆ ಬರುತ್ತಿದ್ದಿತು. ಒಟ್ಟಿನಲ್ಲಿ, ಎರಡೂವರೆ ನೂರು ವರ್ಷಗಳ ತನಕ ಯಾವ ಬಿಳಿಯರಿಗೂ ಪ್ರವೇಶವನ್ನೂ ಕೊಡದೆ ಉಳಿದುದರಿಂದಲೇ ಜಪಾನವು ಇಂದಿನ ಘನತೆಗೆ ಏರಲು ತಕ್ಕದ್ದಾಯಿತೆಂದು ನಿಃಸಂ ದೇಹವಾಗಿ ಹೇಳಬಹುದು. ಬಿಳಿ ಜನಾಂಗಕ್ಕೆ ಏಶಿಯಾಖಂಡದ ತುಂಬೆಲ್ಲ ಮಹಾ ಗೌರವವಿದೆ; ಆದರೆ ಅದನ್ನು ಜಪಾನದವರು ಅಷ್ಟೊಂದು ಮನ್ನಿಸುವುದಿಲ್ಲ. ಹೆಚ್ಚಾಗಿ ಹೇಳುವುದಾದರೆ, ಬಿಳಿಯರು ಮೂರು ಮೊಳ ಹಾರಿದರೆ, ಜಪಾನರು ಆರು ಮೊಳ ಹಾರುವ ಬಂಟರಾಗಿರುವ ರೆಂದು ಹೇಳಬಹುದು.

ಎಷ್ಟೋ ಪಾದರಿಗಳು ಏಸುವಿನ ಹೆಸರಿನಲ್ಲಿ ಬೇಕಾದಂತಹ ಕಾರ್ಯ ಗಳನ್ನು ಕೈಕೊಂಡಿದುದನ್ನು ನಾವು ನೋಡಬಹುದು. ಧರ್ಮಕ್ಕೆ ಸಂಬಂಧ ಪಡದ ವಿಷಯಗಳಲ್ಲಿ ಕೈಹಾಕಿ, ಏಶಿಯಾದ ಎಷ್ಟೋ ದೇಶಗಳ ಸ್ವಾತಂತ್ರ್ಯ ವನ್ನು ಹರಣಮಾಡಿದುದನ್ನು ಕಾಣಬಹುದು. ಅಂತಹ ಪಾದರಿಗಳ ಚಾತು ರ್ಯವು ಜಪಾನಿನಲ್ಲಿ ಸಾಗದಂತಾಗಿದ್ದುದರಿಂದಲೇ ಆ ದೇಶವು ಸ್ವಾತಂತ್ರ್ಯ ಸುಖವನ್ನು ಇಂದಿಗೂ ಸವಿಯುತ್ತಲಿದೆ. ಪಾಳಯಗಾರರ ಚಿತ್ರಹಿಂಸೆಯು

ಅಮಾನುಷವೆಂದು ಒಪ್ಪಿದರೂ ಅದು ದೇಶದ ಸ್ವಾತಂತ್ರ್ಯವನ್ನು ಉಳಿಸಲಿಕ್ಕೆ ಕಾರಣವಾದುದರಿಂದ ದಿವ್ಯವಾದುದೆಂದೇ ಅನ್ನುವಂತಾಗಿದೆ.

ಬೌದ್ಧ ಧರ್ಮವೂ ಕ್ರಿಸ್ತಧರ್ಮದಂತೆಯೇ ಪರದೇಶದಿಂದ ಜಪಾನಕ್ಕೆ ಬಂದದ್ದು. ಆದರೂ ೧೦೦ಕ್ಕೆ ೯೦ ರಂತೆ ಜಪಾನೀಯರು ಈಗ ಬೌದ್ಧ ಧರ್ಮದವರಾಗಿ ಉಳಿಯಲು ಕಾರಣವೇನು? ಅದೇ ಕ್ರೈಸ್ತ ಮತವು ಪರಿಚಯವಾದ ಐವತ್ತು ವರ್ಷಗಳಲ್ಲಿಯೇ ನಿರ್ಮೂಲವಾದುದರ ಗುಟ್ಟೇನು? ಇವೆರಡಕ್ಕೂ ಒಂದೇ ಉತ್ತರವೆಂದರೆ— **ಬೌದ್ಧ ಸನ್ಯಾಸಿಗಳಿಗೆ ಚಕ್ರಾಧಿಪತ್ಯವನ್ನು ಕಟ್ಟುವ ಆಶೆಯಿರಲಿಲ್ಲವೆಂಬುದು.** ಅಶೋಕ ಚಕ್ರವರ್ತಿಯ ಅಪ್ಪಣೆಯಿಂದ ಹೊರಟ ಸನ್ಯಾಸಿಗಳು ಬರಿ ಮತಪ್ರಚಾರ ಕಾರ್ಯದಲ್ಲಿಯೇ ತೊಡಗಿದ್ದರಲ್ಲದೆ ಇನ್ನಿತರ ಹವ್ಯಾಸವನ್ನು ಅವರು ಮನದಿಂದಲೂ ನೆನೆಯುತ್ತಿರಲಿಲ್ಲ. ಅದರಂತೆ ಚೀನಿಸ ಬೌದ್ಧ ಸನ್ಯಾಸಿಗಳೂ ಮತ ಪ್ರಚಾರವನ್ನಷ್ಟೇ ಮನದ ಮುಂದಿಟ್ಟುಕೊಂಡು ಬಂದು, ಜಪಾನದ ಜನರಲ್ಲಿ ಒಂದಾಗಿ ಕೂಡಿದ್ದುದರಿಂದ ಬೌದ್ಧ ಮತದ ಹಬ್ಬುಗೆಯು ಹೆಚ್ಚಾಗಲಿಕ್ಕೆ ಇಲ್ಲಿ ಆಸ್ಪದವು ದೊರೆಯಿತು. ಬೌದ್ಧ ಸನ್ಯಾಸಿಗಳು ಸಿಲೋನ, ಬ್ರಹ್ಮದೇಶ, ಸಯಾಂ ದೇಶಗಳಿಗೆ ಹೋಗಿ ಇಡೀ ಜನಾಂಗವನ್ನೇ ಬೌದ್ಧಮತಾವಲಂಬಿಯನ್ನಾಗಿ ಮಾಡಿದರೂ ಅವರ ಸ್ವಾತಂತ್ರ್ಯದ ಸುದ್ದಿಗೆ ಕೂಡ ಅವರು ಹೋಗಲಿಲ್ಲ. ಇವರಂತೆ **ಕ್ರಿಸ್ತ ಧರ್ಮದ ಪಾದರಿಗಳೂ ಬರಿ ಮತಪ್ರಚಾರ ಕಾರ್ಯವನ್ನಷ್ಟೇ ಕಡೆತನಕ ತಮ್ಮ ಗುರಿಯನ್ನಾಗಿಟ್ಟುಕೊಂಡಿದ್ದರೆ, ಮುಂಚೆ ೧೫ ಲಕ್ಷ ಜಪಾನೀಯರು ಕ್ರಿಸ್ತಮತವನ್ನು ಕೈಕೊಂಡಂತೆ ಇಡಿ ಜಪಾನವೇ ಕ್ರಿಸ್ತಧರ್ಮದ ದೇಶವಾಗಿ ಮೆರೆಯುತ್ತಿದ್ದಿತು. ಆದರೆ ಈ ಪಾದರಿಗಳ ಚಕ್ರಾಧಿಪತ್ಯದ ಮಹತ್ವಾಕಾಂಕ್ಷೆಯು ಸ್ವಾಭಿಮಾನಿಗಳಾದ ಜಪಾನೀಯರಲ್ಲಿ ದೇಶಪ್ರೇಮದ ಹಂಬಲವನ್ನು ಹೆಚ್ಚಿಸಿತು. ಅದುಕಾರಣವೇ ಅವರಿಗೆ ಕ್ರಿಸ್ತಧರ್ಮಕ್ಕೆ ಅರ್ಧಚಂದ್ರವನ್ನೇ ಕೊಡಬೇಕಾಗಿ ಬಂದಿತು.**

---

# ೫. ಪರದೇಶೀಯರ ಪುನರಾಗಮನ

## (Reappearance of foreigners)



ಕ್ರಿ. ಶ. ೧೮೪೫ರಲ್ಲಿ ತೋಕುಗಾದ ವಂಶದ ಸರ್ವಾಧಿಕಾರಿಯು ಡಚ್ಚ ವರ್ತಕರ ಮುಖಾಂತರವಾಗಿ ಪ್ರಪಂಚದ ಸುದ್ದಿಯನ್ನೆಲ್ಲ ತಿಳಿದು ಕೊಂಡನು. ಆಗ ಅವನು ಪರದೇಶೀಯರಿಗಾಗಿ ಮುಚ್ಚಿದ ತನ್ನ ದೇಶದ ಕದವನ್ನು ಮತ್ತೆ ತೆರೆದಿಟ್ಟನು. ಹೀಗೆ ತಮಗೆ ಅವಕಾಶವು ದೊರೆತು ದನ್ನು ತಿಳಿದು, ಮತ್ತೆ ಬಿಳಿ ಜನಾಂಗದವರು ಜಪಾನದ ಒಳಕ್ಕೆ ನುಗ್ಗಿ ಬರತೊಡಗಿದರು. ಆದರೆ ಆ ನಾವಿಕರು ತಮ್ಮ ಒರಟುತನವನ್ನು ಮುನ್ನಿ ನಂತೆಯೇ ಏಕಪ್ರಕಾರವಾಗಿ ಸಾಗಿಸಿದರು. ಇದರಿಂದ ಹೊಸ ಸರ್ವಾಧಿ ಕಾರಿಯ ಮನವು ಮತ್ತೆ ಬೇರೆಯಾಗಲು ಕಾರಣವಾಯಿತು. ಪೂರ್ವಿಕ ರಿಂದ ನಡೆಯಿಸುತ್ತ ಬಂದಿರುವ ಏಕಾಂತವಾಸವೇ ಅವನಿಗೆ ಮತ್ತೆ ಬೇಕೆಂದೆನಿಸಿತು. ಆದ್ದರಿಂದಲೇ ಹೊಸ ಕಾನೂನನ್ನು ಕೂಡಲೇ ಕಿತ್ತಿ ಹಾಕಿ ಹಳೆಯ ಕಟ್ಟಳೆಯನ್ನೇ ರೂಢಿಯಲ್ಲಿ ತಂದನು. ಇದರಿಂದ ಜಪಾನ ವನ್ನು ಪರಕೀಯರು ಸೇರುವ ಮಾರ್ಗವು ಮತ್ತೆ ಕಷ್ಟದಾಯಕವಾ ಯಿತು. ಹೊರಗಿನ ಹಡಗವೊಂದು ಒಳಗೆ ಬಂದ ಕೂಡಲೆ ಅದು ಅಧಿ ಕಾರಿಗಳ ಚಿತ್ರಹಿಂಸೆಗೆ ಬಲಿ ಬಿದ್ದಿತೆಂದೇ ತಿಳಿಯಬೇಕು. ಕ್ರಿ. ಶ. ೧೮೫೨ ರಲ್ಲಿ **ಸಾಬ್ರುಂಶ**ದಿಂದ ಬಂದ ಅಮೇರಿಕದವರ ಹಡಗವೊಂದು ಜಪಾನದ ದಂಡೆಯನ್ನು ತಲಪುತ್ತಲೇ ಅದರ ಮೇಲೆ ಸಿಡಿಗುಂಡುಗಳು ಬರತೊಡಗಿ ದುವು. ಇದರಿಂದ ಅದಕ್ಕೆ ಸಾಕುಬೇಕೆಂದಾಗಿ ಅದು ಚೀನದೇಶಕ್ಕೆ ಸಾಗಿಹೋಗಬೇಕಾಯಿತು.

ಈ ಸಮಯದಲ್ಲಿ ಅಧಿಕಾರಕ್ಕೆ ಬಂದ ಸರ್ವಾಧಿಕಾರಿಗಳು ತಮ್ಮ ಹಿರಿಯರಂತೆ ಬಲವುಳ್ಳವರಿರಲಿಲ್ಲ. ಆದ್ದರಿಂದ ಎಷ್ಟೋ ಪಾಳಯಗಾರರು ಹೆಚ್ಚಿನ ಅಧಿಕಾರವನ್ನು ಪಡೆಯುವುದಕ್ಕೆ ಆರಂಭಿಸಿದರು. ಇದರಲ್ಲಿಯೂ

ಆರ್ಥಿಕ ದುಸ್ಥಿತಿಯು ಬೇರೆ ದೇಶದಲ್ಲಿ ತಲೆಯೆತ್ತುತ್ತಿದ್ದಿತು. ಪಂಗಡ ಗಳ ಪದ್ಧತಿಯೂ ಜನರಿಗೆ ತಾಪದಾಯಕವಾಗತೊಡಗಿತ್ತು. ಆದ್ದರಿಂದ ಜನರು ಸರ್ವಾಧಿಕಾರಿಯನ್ನೇ ಕಿತ್ತಿಹಾಕಬೇಕೆಂದು ಹವಣಿಸತೊಡಗಿ ದರು. ಕೆಲವು ಕ್ಷತ್ರಿಯರೂ ರಾಜ್ಯವನ್ನು ಸರ್ವಾಧಿಕಾರಿಗಳಿಂದ ಕಸಿದು ಕೊಂಡು ಮುನ್ನಿನ ಚಕ್ರವರ್ತಿಗಳಿಗೆ ಒಪ್ಪಿಸಬೇಕೆಂಬ ಹಂಚಿಕೆಯನ್ನೂ ಹೂಡಿದ್ದರು. ಈ ರೀತಿಯಾಗಿ ದೇಶದ ಆಂತರ್ಯದಲ್ಲಿ ಎಲ್ಲೆಲ್ಲಿಯೂ ಅಶಾಂತಿಯು ನೆಲೆಸಿದ್ದಿತು.

ಕ್ರಿ. ಶ. ೧೮೫೩ರಲ್ಲಿ ಅಮೇರಿಕೆಯ ಹೆಸರಾದ ನಾವಾಡಿಗನಾದ **ಪೇರಿ**ಯು ನಾಲ್ಕು ದೊಡ್ಡ ದೊಡ್ಡ ಹಡಗುಗಳಲ್ಲಿ ಸೈನ್ಯವನ್ನು ತುಂಬಿ ಕೊಂಡು ಟೋಕಿಯೋ ಪಟ್ಟಣದ ತೀರಕ್ಕೆ ಬಂದು, ವ್ಯಾಪಾರಕ್ಕೆಂದು ದೇಶದ ಬಾಗಿಲುಗಳನ್ನು ತೆರೆದೇ ತೀರಬೇಕೆಂದು ಗುಡುಗುಹಾಕಿದನು. ಇವನ ಗುಡುಗನ್ನು ಕೇಳಿ ಕೆಲವು ಪಾಳಯಗಾರರು ಕಾಳಗವನ್ನೇ ಹೂಡಬೇಕೆಂದು ಸರ್ವಾಧಿಕಾರಿಗೆ ಸಲಹೆಯನ್ನಿತ್ತರು. ಮತ್ತೆ ಕೆಲವರು ಶತ್ರುವು ಬಲಿಷ್ಠನಾಗಿ ತೋರುವುದರಿಂದ ದುಡುಕುವುದಕ್ಕಿಂತ ವ್ಯಾಪಾ ರಕ್ಕೆ ಅನುಮತಿಯನ್ನು ಕೊಡುವುದೇ ಯೋಗ್ಯವೆಂದಂದರು. ಸರ್ವಾಧಿ ಕಾರಿಯು ಈ ಎರಡೂ ಸಲಹೆಗಳನ್ನು ತೂಗಿ ನೋಡಿ, ಅನುಮತಿಯನ್ನು ಕೊಡುವುದೇ ಸುರಕ್ಷಿತವೆಂಬ ಅಭಿಪ್ರಾಯಕ್ಕೆ ಬಂದನು. ಮುನ್ನಿನ ಏಕಾಂತವಾಸವು ತಪ್ಪಿತು. ಅಮೇರಿಕೆಯವರೊಡನೆ ವ್ಯಾಪಾರದ ಒಪ್ಪಂದವಾಯಿತು. ಆದರೆ ಈ ಕೌಲು ಆದ ಹನ್ನೆರಡು ವರ್ಷಗಳಲ್ಲಿಯೇ ಸರ್ವಾಧಿಕಾರಿಯು ರಾಜ್ಯದ ಮೇಲಿನ ತನ್ನ ಹಿಡಿತವನ್ನು ಕಳೆದುಕೊಂ ಡನು.

ಅಮೇರಿಕೆಯಂತೆ ಇಂಗ್ಲಂಡ, ಫ್ರಾನ್ಸ, ರಶಿಯಾ ಮುಂತಾದ ದೇಶಗಳು ತಮಗೂ ವ್ಯಾಪಾರದ ಸೌಕರ್ಯಗಳನ್ನು ಒದಗಿಸಿಕೊಡಬೇ ಕೆಂದೂ ಇಲ್ಲವಾದರೆ ಕಾಳಗಕ್ಕೆ ನಿಲ್ಲುವೆವೆಂದೂ ಸರ್ವಾಧಿಕಾರಿಗೆ ಸುದ್ದಿಯನ್ನು ಮುಟ್ಟಿಸಿದವು. ಅದನ್ನು ಕೇಳಿ ಬಲಹೀನನಾಗಿದ್ದ ಆತನು ಅವರಿಗೂ ಬಗ್ಗಿದನು; ವ್ಯಾಪಾರಕ್ಕೆ ಅವರಿಗೂ ಸೌಕರ್ಯಗಳನ್ನು

ಒದಗಿಸಿಕೊಟ್ಟನು. ಈ ರೀತಿಯಾಗಿ ಬಿಳಿಯರ ಮೇಲೆ ಪೂರ್ವಜರು ಇಡುತ್ತ ಬಂದ ದರ್ಪವನ್ನು ಈ ಸರ್ವಾಧಿಕಾರಿಯು ಕಳೆದುಕೊಂಡು ಬಿಟ್ಟನು.

ಜನಸಾಮಾನ್ಯವು ದೇಶದೊಳಗಿನ ಬಿಳಿ ಜನಾಂಗದವರ ವ್ಯಾಪಾರ ವನ್ನು ನೋಡಿ ಸಹಿಸದಾಯಿತು. ಆದರೆ ಮಾಡುವುದೇನು! ಪರಕೀಯರ ಶಕ್ತಿಯು ಮುಂದೆ ಸರಕಾರವೇ ಮಂಡಿಯೂರಿತ್ತೆಂದ ಮೇಲೆ ಬೇರೆ ಉಪಾಯವೇ ಇರಲಿಲ್ಲ. ಒಮ್ಮೆ ಯೋಕೋಹಾಮದ ಮಾರ್ಗದಲ್ಲಿ ಹೋಗುತ್ತಿರುವ ಮೂವರು ಆಂಗ್ಲ ವರ್ತಕರು ಒಬ್ಬ ಪಾಳಯಗಾರನಿಗೆ ಸರಿಯಾದ ಮಾನವನ್ನು ತೋರಿಸಲಿಲ್ಲ. ಇದೇ ಕಾರಣದಿಂದ ಆ ಮೂವ ರನ್ನೂ ಪಾಳಯಗಾರನ ಅನುಯಾಯಿಗಳು ಆಗಲೇ ಕೊಂದುಹಾಕಿದರು. ಆದರೆ ನಮ್ಮ ಬಡ ಸರ್ವಾಧಿಕಾರಿಯು ಈ ಘಟನೆಯ ಪರಿಣಾಮವಾಗಿ ಆಂಗ್ಲ ಸರಕಾರಕ್ಕೆ ಪರಿಹಾರ ದ್ರವ್ಯವನ್ನು ಸಲ್ಲಿಸುವಂತಾಯಿತು. ಹೀಗೆ ಸಲ್ಲಿಸಿದ್ದುದು ದೇಶಕ್ಕೇ ಅಪಮಾನವಾದಂತಾಯಿತೆಂದು ಎಷ್ಟೋ ಕ್ಷತ್ರಿ ಯರು ತಮ್ಮ ಕೂಗನ್ನು ಸರಕಾರಕ್ಕೆ ಕೇಳಿಸಿದರು. ಕಡೆಗೆ ತಾವೇ ಆಂಗ್ಲೇಯರ ಸಮಾಚಾರವನ್ನು ತೆಗೆದುಕೊಳ್ಳುವುದೆಂದು ಐವರು ಪಾಳಯಗಾರರು ಒಂದುಗೂಡಿದರು. ಆಯಿತು; ಇಂಗ್ಲಿಷರ ಹಡಗದ ಮೇಲೆ ಗುಂಡಿನ ಸುರಿಮಳೆಯು ಸುರಿಯಲಾರಂಭವಾಯಿತು. ಆದರೆ ಆಂಗ್ಲೇಯರು **"ಅರಸರ ಮೇಲೆ ಅರಸರನ್ನು ಹಾಕಿ ಯುದ್ಧಮಾಡುವ ಕೆಲೆಯಲ್ಲಿ ನಿಪುಣರಲ್ಲವೆ!"** ಸರ್ವಾಧಿಕಾರಿಗೆ ತಕ್ಕಷ್ಟು ಹಣದ ನೆರವ ನ್ನಿತ್ತು ಆತನ ಕೈಯಿಂದಲೇ ಗಲಾಟೆಗೆ ಕಾರಣರಾದ ಪುಂಡರನ್ನು ಅವರು ಕೊಲ್ಲಿಸಿಬಿಟ್ಟರು. ಇಂತಹ ಸರ್ವಾಧಿಕಾರಿಗಳ ದುಷ್ಟ ಕಾರ್ಯಗಳಿಂದ ಜನರೆಲ್ಲರೂ ರೇಗಿದರು. ಅವನನ್ನು ಧಿಕ್ಕರಿಸುವುದಕ್ಕಾರಂಭಿಸಿದರು. ಆತನನ್ನು ತಳ್ಳಿಬಿಡಬೇಕೆಂಬ ಪ್ರಯತ್ನಗಳೂ ಆಗ ತೀವ್ರವಾಗಿ ನಡೆದವು. ಇವುಗಳ ಪರಿಣಾಮವಾಗಿ ಕ್ರಿ. ಶ. ೧೮೬೭ರಲ್ಲಿ ದೊಡ್ಡ ಅಂತರ್ಯುದ್ಧ ವಾಗುವ ಸಮಯವೇ ಒದಗಿತು. ಆಂಗ್ಲೇಯರೂ ಫ್ರೆಂಚರೂ ಸರ್ವಾಧಿ ಕಾರಿಗೆ ತಕ್ಕ ಸಹಾಯವನ್ನು ಕೊಡುವುದಾಗಿ ಭರವಸೆಯಿತ್ತಿದ್ದರು.

ಆದರೆ ಸರ್ವಾಧಿಕಾರಿಯು ದೂರದರ್ಶಿಯಾಗಿದ್ದನು; ಹೆರವರ ನೆರವಿನಿಂದ ತನ್ನವರ ರಕ್ತವನ್ನು ಸೂರೆಗೊಳ್ಳುವುದಕ್ಕಿಂತ ಅಧಿಕಾರ ಸೂತ್ರಗಳನ್ನು ಬಾಧ್ಯರಾದ ಮುಂಚಿನ ಚಕ್ರವರ್ತಿಗಳಿಗೆ ಒಪ್ಪಿಸುವುದೇ ಮೇಲೆಂದು ಆತನು ಬಗೆದನು. ಅದರಂತೆ ಮಾಡಿ ಅಂತರ್ಯುದ್ಧವನ್ನು ನಿಲ್ಲಿಸಿದನು. ಅಂತೂ ಜಪಾನವನ್ನು ಎರಡೂವರೆ ನೂರು ವರ್ಷಗಳ ವರೆಗೆ ಅಭಿವೃದ್ಧಿಗೆ ತಂದು, ಶಾಂತಿಪರಿಪಾಲನೆಯನ್ನು ಮಾಡಿಕೊಂಡು ಬಂದ ತೋಕುಗಾವ ಸರ್ವಾಧಿಕಾರಿಗಳ ವಂಶದವರ ಆಡಳಿತವು ಹೀಗೆ ಕೊನೆಗಂಡಿತು. ಬಿಳಿಯರ ಪುನರಾಗಮನದಿಂದ ಜಪಾನಿಯರಲ್ಲಿ ದೇಶಪ್ರೇಮ, ರಾಜಭಕ್ತಿ, ಸ್ವಾರ್ಥತ್ಯಾಗ ಮುಂತಾದ ಸದ್ಗುಣಗಳು ಉದಯವಾಗಲು ಕಾರಣವಾಯಿತಲ್ಲದೆ ಬೇರಿಲ್ಲ.

---

# ೬. ಜಪಾನದ ಹೊಸಯುಗ

## ಮೇಜಿ ರಾಜ್ಯದ ಪುನಃಸ್ಥಾಪನೆ ಮತ್ತು ಆಳಿಕೆ

(೧೮೬೮–೧೯೧೨)



**ಮುಟ್ಸುಹಿತೋ** (Mutsuhito) ಮತ್ತು **ಮೇಜಿ** (Meiji) ಎಂಬ ಹೆಸರುಗಳು ಯಥಾರ್ಥವಾದವುಗಳು. ಮುಟ್ಸುಹಿತೊ ಚಕ್ರವರ್ತಿಗಳ ಕಾಲವು ಜ್ಞಾನಪ್ರಕಾಶವಾದುದರಿಂದ ಅವರ ಕಾಲವು **ಮೇಜಿಶಕೆ** ಯೆಂಬ ಹೆಸರಿನಲ್ಲಿ ಪ್ರಸಿದ್ಧವಾಗಿರುವುದು. ಜಪಾನದೇಶದಲ್ಲಿ ಶಕೆಯು ಚಕ್ರವರ್ತಿಯು ಪಟ್ಟವೇರಿದಾಗ ಪ್ರಾರಂಭವಾಗಿ, ಆತನು ಮಡಿದಾಗ ಮುಗಿಯುವುದು. ಈಗ ಆಳುತ್ತಿರುವ ಚಕ್ರವರ್ತಿಗಳ ಕಾಲವು **ಷೋವ** ಶಕೆಯಿಂದ ಪ್ರಸಿದ್ಧವಾಗಿರುವುದು. ಜಪಾನದಲ್ಲಿ ಆಳಿದ ಚಕ್ರವರ್ತಿಗಳಲ್ಲಿ ಮೇಜಿಗಳೇ ದೀರ್ಘವಾದ ರಾಜ್ಯಭಾರವನ್ನು ಮಾಡಿದವರು. ಇವರ ನಾಲ್ವತ್ತೈದು ವರ್ಷಗಳ ಅವಿಚ್ಛಿನ್ನವಾದ ಆಡಳಿತದಲ್ಲಿ ದೇಶವು ನಾನಾ ಮುಖವಾಗಿ ಪ್ರಗತಿಯನ್ನು ಪಡೆದು, ಪ್ರಥಮವರ್ಗದ ರಾಷ್ಟ್ರಗಳ (first class powers) ಮಾಲಿಕೆಯಲ್ಲಿ ಸೇರಲಾಯಿತು.

ಚಕ್ರವರ್ತಿಗಳ ಕೈಗೆ ಆಡಳಿತವು ಬಂದೊಡನೆಯೇ ಮುಂಚೆ, ಜನರ ಒಗ್ಗಟ್ಟಿಗೆ ಅಡ್ಡವಾಗಿದ್ದ ಪಂಗಡಗಳ ಕಟ್ಟನ್ನು ಕಳಚಿ ಒಗೆಯಲಾಯಿತು. ಇತರ ಪಾಶ್ಚಿಮಾತ್ಯ ದೇಶಗಳಂತೆ ಜಪಾನವೂ ಮುಂದುವರಿಯುವುದಕ್ಕಾಗಿ ಜನಗಳಿಗೆ ಐದು ವಾಗ್ದಾನಗಳನ್ನು ಕೊಡುವುದೆಂದು ಗೊತ್ತಾಯಿತು. ೧. ಸಭೆಯನ್ನು ಸೇರಿಸಿ ಪ್ರಜೆಗಳ ಒಪ್ಪಿಗೆಯಿಂದ ರಾಜ್ಯಭಾರವನ್ನು ಸಾಗಿಸುವುದು. ೨. ಮೇಲು ಕೀಳೆಂಬ ಭಾವನೆಗಳನ್ನು ತೆಗೆದು ಪ್ರತಿಯೊಬ್ಬ ಪ್ರಜೆಯು ದೇಶಕಾರ್ಯದಲ್ಲಿ ತೊಡಗುವಂತೆ ಮಾಡಲಾಗುವುದು. ೩. ರಾಜಕಾರಣದವರೂ ಸೇನಾಧಿಕಾರಿಗಳೂ

ಪರಸ್ಪರ ಸಹಕಾರದಿಂದ ಜನರ ಏಳ್ಗೆಯ ಕಡೆಗೆ ಲಕ್ಷ್ಯಕೊಡುವಂತೆ ನೋಡಿಕೊಳ್ಳುವುದು. ೪. ಕಂದಾಚಾರದ ಪದ್ಧತಿಗಳನ್ನು ತಡೆಯಲಾಗುವುದು. ೫. ಪ್ರಪಂಚದಲ್ಲಿಯ ಸಕಲ ದೇಶಗಳ ವಿಜ್ಞಾನವನ್ನು ದೇಶದ ಪ್ರಗತಿಗಾಗಿ ಉಪಯೋಗಿಸಿಕೊಂಡು ದೇಶವು ಉನ್ನತ ಸ್ಥಿತಿಗೆ ಮುಟ್ಟುವಂತೆ ಮಾಡುವುದು.

ಈ ನಂತರ ಪ್ರಜೆಗಳು ಸಹ ಹೊಸ ಸರಕಾರದೊಡನೆ ಸಹಕರಿಸ ತೊಡಗಿದರು. ಅವರ ಧ್ಯೇಯವಾದರೂ ತಕ್ಕಷ್ಟು ಬಲವನ್ನು ತಮ್ಮಲ್ಲಿ ಮೈಯ್ಗೂಡಿಸಿಕೊಂಡು, ಬಿಳಿ ಜನಾಂಗದವರೊಡನೆ ಸಡ್ಡು ಹೊಡೆದು ನಿಲ್ಲಬೇಕೆಂಬುದೇ ಆಗಿದ್ದಿತು.

ಮೇಜಿ ಚಕ್ರವರ್ತಿಗಳು **ಕಿಯೋಕೋ** ಹಳೆಯ ರಾಜಧಾನಿಯನ್ನು ಬಿಟ್ಟು, **ಯೋದೊ** (ಟೋಕಿಯೋ) ಎಂಬ ಪಟ್ಟಣದಲ್ಲಿ ಬಂದುನಿಂತರು. ಅನೇಕ ಇಲಾಖೆಗಳಲ್ಲಿ ದೇಶವನ್ನು ಆಳತೊಡಗಿದರು. ಸರ್ವಾಧಿಕಾರಿಯ ವಶದಲ್ಲಿರುವ ಸಕಲ ಭೂಮಿಕಾಣಿಕೆಗಳನ್ನು ಸರಕಾರವು ಮುಟ್ಟುಗೋಲು ಹಾಕಿಕೊಂಡಿತು. ದೇಶಪ್ರೇಮಿಗಳಾದ ಎಷ್ಟೋ ಪಾಳಯಗಾರರು ತಮ್ಮ ತಮ್ಮ ರಾಜ್ಯಗಳನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸಿದರು. ಒಪ್ಪಿಸದಿರುವ ಪಾಳಯಗಾರರ ರಾಜ್ಯಗಳು ಕೂಡ ಸರಕಾರದ ಮುಟ್ಟುಗೋಲಿಗೆ ಒಳಗಾದುವು. ಇಡೀ ದೇಶವನ್ನು ನವೀನ ಪದ್ಧತಿಯಂತೆ ನಲವತ್ತಾರು ಪ್ರಾಂತಗಳಲ್ಲಿ ವಿಂಗಡಿಸಲಾಗಿ, ಪಾಳಯಗಾರರನ್ನು ಆಯಾಯ ಪ್ರಾಂತಗಳ 'ಗವರ್ನರ'ರನ್ನಾಗಿ ಮಾಡಿದುದಾಯಿತು ಆಸ್ಥಾನದ ಹೆಸರಾದ **ಕುಗೆ,** ಪಾಳಯಗಾರನ ಹೆಸರಾದ **ದ್ಯಾಮ್ಯೊ** (Daimyo) ಮುಂತಾದ ಬಿರುದು ಬಾವಲಿಗಳನ್ನು ನಿಲ್ಲಿಸಿ ತಡೆಯಲ್ಪಟ್ಟಿತು. ಅಂತರ್ವಿವಾಹಗಳು ಬೇಕಾದಷ್ಟು ನಡೆದುವು. ಪ್ರಜೆಗಳು ಕಸಬುಗಳಲ್ಲಿ ನಿಪುಣರಾಗಲೆಂಬ ಉದ್ದೇಶದಿಂದ, ಉತ್ತಮ ತರಗತಿಯವರಿಗೆ ಬಹುಮಾನವನ್ನು ಕೊಡಲು ಪ್ರಾರಂಭವಾಯಿತು. ಬೇರೆ ಬೇರೆ ದೇಶಗಳ ನಾಗರಿಕತೆಯನ್ನು ತಿಳಿದುಕೊಳ್ಳುವುದಕ್ಕೆಂದು ಅನೇಕ ತರುಣರು ಪರದೇಶಗಳಿಗೆ ಕಳಿಸಲ್ಪಟ್ಟರು. ಅಂಚೆ, ಟೆಲಿಫೋನು, ಉಗಿಬಂಡಿಗಳ

ಅನುಕೂಲತೆಗಳು ದೇಶದಲ್ಲೆಲ್ಲ ಆದುವು. ಪಾಶ್ಚಿಮಾತ್ಯ ನಾಗರಿಕತೆಯು ದೇಶದಲ್ಲೆಲ್ಲ ಹರಿದಂತೆ ಗಂಡಸರೂ ಹೆಂಗಸರೂ ಪರಕೀಯರಂತೆ ಉಡುಪನ್ನು ಧರಿಸಲು ಪ್ರಾರಂಭಿಸಿದರು.

ಸೈನ್ಯದ ಇಲಾಖೆಯಲ್ಲಿ ಸಾಕಷ್ಟು ಬದಲಾವಣೆಗಳಾದುವು. ಭೂ-ಸೈನ್ಯ, ಜಲಸೈನ್ಯವೆಂದು ಬೇರೆ ಬೇರೆಯಾಗಿ ಏರ್ಪಾಡಾಯಿತು. ನಿರ್ದಿಷ್ಟವಾದ ಸಾಮಾನ್ಯ ಉಡುಪನ್ನೇ ಧರಿಸುವುದೆಂಬ ಕಟ್ಟಳೆಯು ರೂಢಿಯಲ್ಲಿ ಬಂದಿತು. ಅನೇಕ ಸೈನ್ಯಶಾಲೆಗಳು ಸ್ಥಾಪಿಸಲ್ಪಟ್ಟು ತಜ್ಞರಾದ ಪರಕೀಯ ಉಪಾಧ್ಯಾಯರುಗಳಿಂದ ದೇಶೀಯರಿಗೆ ಸೈನ್ಯಶಿಕ್ಷಣವು ಕೊಡಲ್ಪಟ್ಟಿತು. ಎಷ್ಟೋ ಆರ್ಥಿಕ ಮುಗ್ಗಟ್ಟುಗಳು ನಡುನಡುವೆ ಬಂದರೂ ಸೈನ್ಯದ ವೆಚ್ಚವನ್ನು ಕಡಿಮೆ ಮಾಡಲಿಲ್ಲ. ಅಂದು ಅಚ್ಚುಕಟ್ಟಾಗಿಯೂ ಗಟ್ಟಿಮುಟ್ಟಾಗಿಯೂ ಕಟ್ಟಿದ ಸೈನ್ಯವೇ ಇಂದು ಚಕ್ರಾಧಿಪತ್ಯದ ವಿಸ್ತಾರಕಾರ್ಯಗಳಲ್ಲಿಯೂ ಧೈರ್ಯವಾಗಿ ಕೆಲಸವನ್ನು ಮಾಡುತ್ತಲಿದೆ. ಜಲಸೈನ್ಯದ ಪ್ರಗತಿಗಾಗಿ, ಪ್ರತಿಯೊಬ್ಬ ಸರಕಾರಿ ಅಧಿಕಾರಿಯು ತನ್ನ ಸಂಬಳದ ಹತ್ತರಲ್ಲೊಂದು ಭಾಗವನ್ನು ಮಾಸಲಾಗಿಡಬೇಕೆಂದು ಹತ್ತಾರು ವರ್ಷ ಕಟ್ಟಳೆಯು ರೂಢಿಯಲ್ಲಿ ಬಂದುದರಿಂದ ಸಾಕಷ್ಟು ಹಣವು ಕೂಡಿ, ಜಲಸೈನ್ಯವು ದಿನೇದಿನೇ ಪುಷ್ಟವಾಗುತ್ತ ನಡೆಯಿತು.

ಕ್ರಿ. ಶ. ೧೮೭೨ರಲ್ಲಿ ಕಡ್ಡಾಯದ ಪ್ರಾಥಮಿಕ ಶಿಕ್ಷಣವನ್ನು ಚಕ್ರವರ್ತಿಗಳು ರೂಢಿಯಲ್ಲಿ ತಂದರು. ಹೊಸ ಹೊಸ ಬಗೆಯ ಕೈಗಾರಿಕೆಗಳಿಗೆ ಪ್ರೋತ್ಸಾಹನವು ದೊರೆಯಿತು. ಈ ಚಕ್ರವರ್ತಿಗಳ ಕಾಲದಲ್ಲಿ ನಡೆದ ಕಾಳಗ, ಆರ್ಥಿಕ ಬದಲಾವಣೆ, ವಿದ್ಯಾಭ್ಯಾಸ ಮುಂತಾದ ವಿಷಯಗಳ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗುತ್ತದೆ. ಕ್ರಿ. ಶ. ೧೯೧೨ನೇ ಜುಲೈ ತಿಂಗಳಲ್ಲಿ ಮೇಜೀ ಚಕ್ರವರ್ತಿಗಳು ಸ್ವರ್ಗಸ್ಥರಾದರು. ಇವರ ಸಾಹಸದಿಂದ ಪಾತಾಳದಲ್ಲಿ ಸಿಕ್ಕುಬಿದ್ದಿದ್ದ ಜಪಾನ ದೇಶವು ಸ್ವರ್ಗದ ವರೆಗೂ ತನ್ನ ಕೀರ್ತಿಯನ್ನು ಹಬ್ಬಿಸಲು ಬಲವುಳ್ಳದ್ದಾಗಿದೆ.

ಮುಂದೆ ೧೯೧೨-೧೯೨೬ರ ವರೆಗೆ **ಕ್ಯೋಷೊ** ಚಕ್ರವರ್ತಿಗಳು ರಾಜ್ಯವನ್ನಾಳಿದರು. ಇವರ ಕಾಲದಲ್ಲಿ ಒದಗಿದ 'ಪ್ರಪಂಚಯುದ್ಧ'

ದಿಂದ ಜಪಾನದ ಕೈಗಾರಿಕೆಗಳಿಗೆ ಚಾಲನೆ ಸಿಕ್ಕಂತಾಗಿ, ಅದು ಧನವಂತ ದೇಶವಾಯಿತು. ಇವರ ಆಡಳಿತದಲ್ಲಿಯೇ, ಜಗತ್ತಿನಲ್ಲಿ ಪ್ರಚಂಡ ರಾಷ್ಟ್ರಗಳೆಂದು ಪ್ರಸಿದ್ಧಿಯನ್ನು ಪಡೆದ ಐದು ರಾಷ್ಟ್ರಗಳಲ್ಲಿ ಜಪಾನವು ಒಂದು ಸ್ಥಾನವನ್ನು ಪಡೆಯಿತು. ಯೋಶಿಹಿತೋ ಚಕ್ರವರ್ತಿಗಳು ಕಾಲವಾದ ಮೇಲೆ ಅವರ ಹಿರಿಯ ಮಕ್ಕಳಾದ **ಷೋವಾ** ಚಕ್ರವರ್ತಿಗಳು ಸನ್ ೧೯೨೬ರಲ್ಲಿ ಪಟ್ಟಕ್ಕೆ ಬಂದರು. ಅವರೇ ಇಂದಿನವರೆಗೂ ಆಳುತ್ತ ಬರುತ್ತಿದ್ದಾರೆ. ಈ ಚಕ್ರವರ್ತಿಗಳ ಕಾಲದಲ್ಲಿ ಜಪಾನು ತನ್ನ ಚಕ್ರಾಧಿಪತ್ಯವನ್ನು ವಿಸ್ತರಿಸುವ ಕಾರ್ಯದಲ್ಲಿ ತೊಡಗಿರುವುದು.

---

ಎರಡನೆಯ ಪ್ರಕರಣ

# ೧. ಜಪಾನಿನಲ್ಲಿ ವಿದ್ಯಾಭ್ಯಾಸದ ಪ್ರಗತಿ



ಜಪಾನೀಯರು ಕಳೆದ ೭೦ ವರುಷಗಳಿಂದ ಆರ್ಥಿಕ, ಸಾಮಾಜಿಕ, ನೈತಿಕ, ಧಾರ್ಮಿಕ, ಬೌದ್ಧಿಕ ಮೊದಲಾದವುಗಳ ಪ್ರಗತಿಗಾಗಿ ಕೈ-ಕೊಂಡ ಎಲ್ಲ ಪ್ರಯತ್ನಗಳು ಫಲಿಸಿದ್ದರಿಂದ ಜಪಾನವು ಇಂದು ಜೀವಂತ ರಾಷ್ಟ್ರವಾಗಿದೆ. ಸಾರ್ವತ್ರಿಕ ವಿದ್ಯಾಪ್ರಸಾರವಂತೂ ಮಾಡಿದ ಕೆಲಸವು ಅಷ್ಟಿಷ್ಟಲ್ಲ. ಇಷ್ಟು ಅದ್ಭುತ ಶಕ್ತಿಯನ್ನು ಜಪಾನೀಯರು ೭೦ ವರುಷಗಳಲ್ಲಿಯೇ ಗಳಿಸಿಕೊಂಡುದನ್ನು ಕಂಡು ಬಿಳಿ ಜನಾಂಗಗಳು ದಿಗ್ಭ್ರಮೆಗೊಂಡಿರುವವು. ನಾಗರಿಕತೆಯ ಅತ್ಯುಚ್ಚ ಶಿಖರವನ್ನು ಮುಟ್ಟಿದವರು ಎಂದು ಜಪಾನೀಯರನ್ನು ಭಟ್ಟಂಗಿಗಳಂತೆ ಹೊಗಳುತ್ತಿರುವ ಪಾಶ್ಚಿಮಾತ್ಯರು ಇಂದಿಗೆ ವಿದ್ಯಾಭ್ಯಾಸ ಪ್ರಗತಿಯಲ್ಲಿ "ಹಳದಿ ರತ್ನ"ದ ದೇಶಕ್ಕಿಂತ ಹಿಂದುಳಿದ್ದಿರುವರೆಂದರೆ ಅವರ ಆ ನಾಗರಿಕತೆಯು ನಗೆಗೀಡಾದಂತಾಗಲಿಲ್ಲವೆ—ಎಂದು ಕೇಳಬಹುದಾಗಿದೆ.

ಇಂದಿನ ಜಗತ್ತಿನಲ್ಲಿ ವಿದ್ಯಾರ್ಜನೆಯು ಪ್ರತಿಯೊಬ್ಬ ಮಾನವನ ಆದ್ಯಕರ್ತವ್ಯವಾಗಿರುವುದು. ಅದನ್ನು ಒದಗಿಸಲು ಎಲ್ಲ ಸರಕಾರಗಳು ಹೆಣಗಲೇಬೇಕು. ಹಾಗೆ ಹೆಣಗದಿರುವ ಸರಕಾರವು ಸರಕಾರವೇ ಅಲ್ಲ. ಜಪಾನ ಸರಕಾರವೂ ದೋಷರಹಿತವಾಗಿದೆಯೆಂದು ಹೇಳಲು ಬರುವಂತಿಲ್ಲ. ಆದರೆ ವಿದ್ಯಾಭ್ಯಾಸದ ವಿಷಯದಲ್ಲಿ ಮಾತ್ರ ಇವರ ವಿರುದ್ಧವಾಗಿ ಆಕ್ಷೇಪಗಳನ್ನು ತೆಗೆಯಲು ಸಾಧ್ಯವೇ ಇಲ್ಲ. ಬಡವ-ಬಲ್ಲಿದನೆಂಬ ಭೇದವಿಲ್ಲದೆ ಸ್ತ್ರೀ-ಪುರುಷರಿಬ್ಬರಿಗೂ ಸರಸ್ವತಿಯ ಕೃಪೆಯಾಗಿದೆ.

ಜಪಾನು ದೇಶವು ಪಾಠಶಾಲೆಗಳ ತವರುಮನೆ. ಉಪಾಧ್ಯಾಯರ ಸಂಖ್ಯೆಯೊಂದರಿಂದಲೇ ಯಾವುದಾದರೊಂದು ಪರದೇಶವನ್ನು ಸಹಜ

ವಾಗಿ ಗೆಲ್ಲಲು ಬರುವಂತಿದೆ. ೧೯೩೫ರ ಕೊನೆಯಲ್ಲಿ ಪ್ರಾಥಮಿಕ ಶಾಲೆ ಮೊದಲುಗೊಂಡು ವಿಶ್ವವಿದ್ಯಾನಿಲಯಗಳ ವರೆಗಿನ ವಿವಿಧ ತರಹದ ೪೬೧೩೭ ವಿದ್ಯಾಲಯಗಳಿದ್ದುವು. ಇವುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಸಂಖ್ಯೆ ೧,೪೦,೩೫,೮೨೩. ಒಂದು ನೂರು ಚದುರ ಕಿಲ್ಲೋಮಿಟರಿಗೆ ಹನ್ನೊಂದು ಶಾಲೆಗಳಿವೆ; ನೂರಕ್ಕೆ ೨೦ರಂತೆ ವಿದ್ಯಾಭ್ಯಾಸಿಗಳಿದ್ದಾರೆ. ಹಳ್ಳಿ, ಪಟ್ಟಣಗಳಲ್ಲಿ ವಿಸ್ತೃತ, ಸುಂದರವಾದ ಕಟ್ಟಡವು ಇದ್ದುದಾದರೆ ಅದು ಶಾಲೆಮನೆಯಲ್ಲದೆ ಮತ್ತಾವುದೂ ಇರಲಾರದು. ಹಳ್ಳಿಗಳಲ್ಲಿ ಆರ್ಥಿಕ ದುಸ್ಥಿತಿಯಿದ್ದರೂ ಶಾಲೆಯ ಕಟ್ಟಡಕ್ಕಾಗಿ ಅಲ್ಲಿಯವರು ಹಣದ ಸಹಾಯವನ್ನು ನೀಡದೆ ಎಂದಿಗೂ ಇರಲಾರರು. ಕೇಂದ್ರ ಸರಕಾರವಂತೂ ಪ್ರತಿವರುಷ ಕೋಟ್ಯಾಂತರ ಎನ್ನುಗಳ ವೆಚ್ಚ ಮಾಡುತ್ತಿದ್ದರೂ ಹಳ್ಳಿಗರು ಸರಕಾರದ ಸಹಾಯವನ್ನು ಪಡೆಯುವುದು ಅಪಮಾನವೆಂದು ಭಾವಿಸಿ, ಸಾರ್ವಜನಿಕ (public) ಶಾಲೆಗಳನ್ನು ಸ್ಥಾಪಿಸಿ ವಿದ್ಯಾಭ್ಯಾಸವನ್ನು ಸಾಗಿಸುವರು. ಹಳ್ಳಿಯ ಶಾಲೆ, ಪಟ್ಟಣದ ಶಾಲೆ ಎಂಬ ಯಾವ ಭೇದವೂ ಇಲ್ಲ; ಕಟ್ಟಡ, ಅಲ್ಲಿರತಕ್ಕ ಸಲಕರಣೆಗಳೆಲ್ಲವೂ ಒಂದೇ ಸಮನಾಗಿರುತ್ತವೆ.

ಜಪಾನಿನಲ್ಲಿ ಒತ್ತಾಯದ ಪ್ರಾಥಮಿಕ ಶಿಕ್ಷಣದ ಅವಧಿಯು ಆರು ವರುಷ ಮಾತ್ರ. ಅದರಿಂದ ವರ್ತಮಾನಪತ್ರಗಳ ಉದ್ಯೋಗವು ಬಹು ಲಾಭದಾಯಕವಾಗಿದೆ. ೩೦ ಲಕ್ಷ ಚಂದಾದಾರರಿದ್ದ ಎರಡು ಪತ್ರಿಕೆಗಳು ಅವ್ಯಾಹತವಾಗಿ ಸಾಗಿವೆ. ಸುದ್ದಿಗಳನ್ನು ತಿಳಿಸಲು ವಿಮಾನುಗಳನ್ನು ಉಪಯೋಗಿಸುತ್ತಾರೆ. ವಿದ್ಯಾವಂತರ ಸಂಖ್ಯೆ ಹೆಚ್ಚಿಗಿರುವುದರಿಂದ ಪ್ರತಿಯೊಂದು ಪತ್ರಿಕೆಯ ಮೊದಲ ಪುಟವು ಪುಸ್ತಕಗಳ ವಿವರಣೆಗಾಗಿ ಮೀಸಲಾಗಿಡಲ್ಪಡುತ್ತಿದೆ. ಪತ್ರಿಕಾಕರ್ತರಿಗೆ ವ್ಯಾಪಾರಸ್ಥರ ಜಾಹೀರಾತಿನ ಹಣಕ್ಕಿಂತ ಪುಸ್ತಕ ಪ್ರಕಟನೆಯಿಂದ ಹೆಚ್ಚು ಹಣವು ದೊರೆಯುತ್ತದೆ. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆಲ್ಲ ಒಂದೇ ತರದ ಕಪ್ಪು ಉಡುಪು (uniform) ಇರುವುದರಿಂದ ಸಿರಿವಂತಿಕೆ, ಪ್ರತಿಷ್ಠೆ, ಗೌರವ ಮೊದಲಾದ ದುರ್ಗುಣಗಳು ಮಾಯವಾಗಿ ಪ್ರತಿಯೊಬ್ಬರು ಬಂಧು ಭಾವನೆಯಿಂದ ವರ್ತಿಸುತ್ತಾರೆ. ಜಪಾನೀಯರ ವಿದ್ಯಾಭ್ಯಾಸವು

ಕ್ರಮೇಣವಾಗಿ ಹೇಗೆ ಮುಂದುವರಿಯಿತೆಂಬುದನ್ನು ಕೆಳಗಿನ ವಿವರಣೆಯಿಂದ ಕಾಣಬಹುದಾಗಿದೆ.

೧೮೬೮ರ ವರೆಗೆ ಜಪಾನು ಪಾಳೆಯಗಾರರ ಬೀಡಾಗಿತ್ತು. ಆದರಿಂದ ದೇಶದ ತುಂಬೆಲ್ಲ ಅಶಾಂತಿ, ನಿರ್ದಯೆ, ಬಡಿದಾಟಗಳು ತಾಂಡವವಾಡುತ್ತಿದ್ದವು. ವಿದ್ಯೆಯು ಹಣವಂತರ ಸೊತ್ತಾಗಿತ್ತು. ಸಾಮಾನ್ಯ ಜನರಿಗೆ ದುರ್ಲಭವಾಗಿತ್ತು. ಆರ್ಥಿಕ ದುಸ್ಥಿತಿ ಹಾಗೂ ಸರಕಾರದ ಉದಾಸೀನತೆಗಳಿಂದ ವಿದ್ಯೆಯು ಮಲಿತ ನೀರಾಗಿತ್ತು. ಆದರೂ ಬೌದ್ಧ ಸನ್ಯಾಸಿಗಳು ಮಾತ್ರ ದೇವಸ್ಥಾನಗಳಲ್ಲಿ ಶಾಲೆಯನ್ನು ಹಾಕಿ ವಿದ್ಯಾದಾನ ಮಾಡುತ್ತಿದ್ದರು. ಚಕ್ರವರ್ತಿಗಳ ಪಿತಾಮಹರಾದ ಮೌಜಿ ಚಕ್ರವರ್ತಿಗಳು ೧೮೬೮ರಲ್ಲಿಯೇ ಪಟ್ಟವನ್ನೇರಿದರು. ಅವರು ಪಾಳೆಯಗಾರರ ಸದ್ದನ್ನಡಗಿಸಿ, ಕೇಂದ್ರ ಸರಕಾರವನ್ನು ಸ್ಥಾಪಿಸಿದರು. ದೇಶೋನ್ನತಿಗಾಗಿ, ಪ್ರಜೆಗಳ ಸುಖಶಾಂತಿಗಾಗಿ ಅನೇಕಾನೇಕ ಮಹತ್ಕಾರ್ಯಗಳನ್ನು ಕೈಕೊಂಡರು. ಆಗ ಅವರು ಕೈಕೊಂಡ ಅಂಥ ಕಾರ್ಯಗಳಲ್ಲಿ ಒತ್ತಾಯದ ಶಿಕ್ಷಣವು ಬಹಳೇ ಮಹತ್ವವಾದುದು. ಅವರು ೧೮೯೦ರಲ್ಲಿ ರಾಜಶಾಸನವೊಂದನ್ನು ಹೊರಡಿಸಿದರು. ಆದರಿಂದ ಕೆಲವು ವರುಷಗಳಲ್ಲಿ ವಿದ್ಯಾವಂತರ ಸಂಖ್ಯೆಯು ಬೆಳೆಯಿತು. ಆ ರಾಜಶಾಸನವು ಹೀಗೆ ಪ್ರಕಟವಾಗಿತ್ತು:—

**" Know ye, our subjects,**

Our Imperial Ancestors have founded our Empire on a basis broad and everlasting and have deeply and firmly implanted Virtue; Our subjects ever united in Loyaly and filial piety have from generation to generation illustrated the beauty there of. This is the glory of the fundamental character of our Empire, and herein also lies

the source of our education. Ye, our subjects, be filial to your parents, affectionate to your brothers and sisters, as husbands and wives be harmonious, as friends true, bear yourselves in modesty & moderation, extend your benevolence to all; Pursue learning and cultivate arts, and thereby develop intellectual faculties and perfect moral powers, further more advance public good and promote common interests; always respect the constitution and observe the laws, should emergency arise, offer yourselves courageously to the state; and thus guard and maintain the prosperity of our Imperial Throne coeval with heaven and earth. So shall ye not only be our good faithful subjects, but render illustrious the best traditions of your forefathers. The way herewith set forth is indeed the teaching bequeathed by our Imperial Ancestors, to be observed alike by their descendants and the subjects, in fallible for all ages and true in all places. It is our wish to lay it to heart, in all reverence, in common with you, our subjects, that we may all thus attain to the same Virtue."

**ಸಾರಾಂಶ**—"ಪ್ರಜೆಗಳೇ, ನಮ್ಮ ಪೂರ್ವದ ಸಾರ್ವಭೌಮರು ಸದ್ಗುಣಗಳ ಭದ್ರವಾದ ತಳಹದಿಯ ಮೇಲೆ ಸಾಮ್ರಾಜ್ಯವನ್ನು ಸ್ಥಾಪಿಸಿದರು. ನಮ್ಮ ಪ್ರಜೆಗಳೂ ರಾಜನಿಷ್ಠೆಯಿಂದ ಒಕ್ಕಟ್ಟಾಗಿ

ಸಾಮ್ರಾಜ್ಯದ ಗೌರವವನ್ನು ಹೆಚ್ಚಿಸಿದರು. ಇದೇ ನಮ್ಮ ವೈಶಿಷ್ಟ್ಯ ವಲ್ಲದೆ ಮತ್ತೇನು? ನಮ್ಮ ಶಿಕ್ಷಣದ ಮೂಲವೂ ಇದರಲ್ಲಿಯೇ ಇದೆ. ಪ್ರಜೆಗಳೇ, ಬಂಧುಬಾಂಧವರೊಡನೆ ಪ್ರೇಮದಿಂದ ನಡೆಯಿರಿ. ರಾಜ್ಯ ನಿಯಮಾನುವರ್ತಿಗಳಾಗಿರಿ. ಪ್ರಸಂಗ ಬಂದರೆ ದೇಶಕ್ಕಾಗಿ ಪ್ರಾಣ ವನ್ನರ್ಪಿಸಿರಿ. ನಮ್ಮ ಸಾಮ್ರಾಜ್ಯಸಿಂಹಾಸನದ ಗೌರವವನ್ನುಳುಹಿ ಕೊಳ್ಳಿರಿ. ಒಳ್ಳೆ ಪ್ರಜೆಗಳಾಗಿ ಬಾಳಿರಿ" ಎಂದು ಸರಕಾರವು ಶಾಸನವನ್ನು ಹೊರಡಿಸಿತ್ತು.

ಜಪಾನಿನ ವಿದ್ಯಾಭ್ಯಾಸಕ್ರಮವು (೧) ಮನೆ, (೨) ನರ್ಸರಿ, (೩) ಕಿಂಡರಗಾರ್ಟನ, (೪) ಪ್ರಾಥಮಿಕ, (೫) ಮಾಧ್ಯಮಿಕ, (೬) ಹೈಸ್ಕೂಲು, (೭) ಪ್ರೌಢ, (೮) ಔದ್ಯೋಗಿಕ ಎಂದು ಮೊದಲಾಗಿ ಎಂಟು ವಿಧವಾಗಿ ವಿಭಾಗಿಸಲ್ಪಟ್ಟಿದೆ.

## ೧. ಮನೆಯ ಶಿಕ್ಷಣ.

೧. ಮನೆಯ ಶಿಕ್ಷಣವು ಬಲು ಮಹತ್ವವಾದದು. ತಾಯಂದಿರು ವಿದ್ಯಾವತಿಯರಿದ್ದರೆ, ಮಕ್ಕಳ ಶಿಕ್ಷಣವು ಬಹು ಸುಲಭವಾಗಿ ಸಾಧಿಸು ವದು. ಆದುದರಿಂದ ಸ್ತ್ರೀಶಿಕ್ಷಣವು ಎಷ್ಟು ಆವಶ್ಯಕವಿದೆಯೆಂಬ ಮಾತನ್ನು ಹೇಳುವದೇ ಬೇಡ. ಜಪಾನಿನಲ್ಲಿ ಹಿಂದಿನಿಂದಲೂ ಮಕ್ಕಳಿಗೆ ದೇಶಪ್ರೇಮದ ಪಾಠವನ್ನು ತಾಯಂದಿರೇ ಹೇಳಿಕೊಡುತ್ತ ಬಂದಿದ್ದಾರೆ. ಇಲ್ಲಿಯ ವಿದ್ಯಾಭ್ಯಾಸವು ಹೆಂಗಸರಿಗೆ ಚಿಕ್ಕಂದಿನಲ್ಲಿಯೇ ಮಾತೃಪದದ ಮಹತ್ವ ವನ್ನು ತಿಳುಹಿಸಿಕೊಡುವುದು. ತಂದೆ-ತಾಯಿಗಳು ಮಕ್ಕಳ ಏಳ್ಗೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಲು ಸದಾಸಿದ್ಧರು. ಉದಾಹರಣಾರ್ಥವಾಗಿ ಒಂದು ಮನೆಯಲ್ಲಿ ಸಾಯಲಾದೊಬ್ಬ ಮುದುಕನಿರುವನೆಂದು ಕಲ್ಪಿಸಿರಿ. ಮನೆಯ ಯಜಮಾನನಲ್ಲಿ ಹಣವೂ ಬಹಳಿಲ್ಲೆಂದು ತಿಳಿಯಿರಿ. ಇದ್ದಷ್ಟು ಹಣವನ್ನು ಅವನು ಮಕ್ಕಳ ಹಿತಕ್ಕಾಗಿ ಮೊದಲು ಉಪಯೋಗಿಸುವನು. ಯಾಕಂದರೆ—ಮುದುಕನ ಜೀವಮಾನವು ಮುಗಿಯಬಂದುದರಿಂದ ಅವನಿಗಾಗಿ ವೆಚ್ಚ ಮಾಡುವುದು ನಿರರ್ಥಕವೆಂದು ಕೈಬಿಡುವನು. ಅದೇ

ಹಣವನ್ನು ಬೆಳೆಯುತ್ತಲಿರುವ ಮಕ್ಕಳ ಪ್ರಗತಿಗಾಗಿ ವಿನಿಯೋಗಿಸಿದರೆ ಸಾರ್ಥಕವಾಯಿತೆಂದು ಬಗೆದು ಆ ರೀತಿಯಿಂದ ವರ್ತಿಸುವನು. ತಂದೆ ತಾಯಿಗಳೆಷ್ಟೇ ಬಡವರಾಗಿದ್ದರೂ ತಮ್ಮ ಮಕ್ಕಳಿಗೆ ಉಡುಪು, ಆಹಾರ, ಪುಸ್ತಕ ಮೊದಲಾದವುಗಳ ಕೊರತೆಯಾಗದಂತೆ ನೋಡಿಕೊಳ್ಳುವರು. ಮಕ್ಕಳ ವಿಷಯಕ್ಕಿರುವ ಇವರ ನಾಣ್ಣುಡಿಗಳು "ಹತ್ತುಸಾವಿರ ಹೊನ್ನಿಗಿಂತ ಹಸುಳೆನು ಹೆಚ್ಚು" ಎಂಬಂಥವು ಬಲು ಮಾರ್ಮಿಕವಾಗಿವೆ. ಹತ್ತುವರುಷದ ಮಕ್ಕಳು ಸಹ ಪರಊರಿಗೆ ಹೋಗಿ ಬೇಕಾದ ಹಾಗೆ ಸ್ವತಂತ್ರ ಜೀವನವನ್ನು ಸಾಗಿಸಬಲ್ಲರು. ಒಂದೆ ಮಾತಿನಲ್ಲಿ ಹೇಳಬೇಕೆಂದರೆ "ಜಪಾನು ಮಕ್ಕಳ ನಂದನವನ"ವೆಂದೆನ್ನಬಹುದು. ಮಮತೆಯ ಪಾಲನಪೋಷಣದಿಂದ ಎಳೆಮಕ್ಕಳು ನಲಿದಾಡುವದರಿಂದಲೆ ಇಂದು ಜಪಾನಿನಲ್ಲಿ ಅಳುವ ಮಕ್ಕಳನ್ನು ಕಾಣುವದು ಅಪರೂಪ. ಚಿಕ್ಕಂದಿನಲ್ಲಿ ಯೋಗ್ಯ ಶಿಕ್ಷಣವು ದೊರೆಯುವದರಿಂದ ಅವರು ತಮ್ಮ ಭಾವೀ ಜೀವನವನ್ನು ಸಾರ್ಥಕಗೊಳಿಸಲು ಯೋಗ್ಯ ದಾರಿಯನ್ನೇ ತುಳಿಯುವರಲ್ಲದೆ ದೇಶಕ್ಕೆ ಕಂಟಕಪ್ರಾಯರಾಗುವದಿಲ್ಲ. "ಮಕ್ಕಳ ಶಿಕ್ಷಣಕ್ಕೆ ಮೊದಲು ತಾಯಶಿಕ್ಷಣ" ಎಂಬ ಮಾತನ್ನರಿತು ಸರಕಾರವು ೧೯೩೦ರಿಂದ ತಾಯಂದಿರಿಗಾಗಿ ವಿಶಿಷ್ಟ ತರದ ಶಿಕ್ಷಣಕ್ರಮವನ್ನು ಏರ್ಪಡಿಸಿದೆ. ಅದು (೧) ಪುಸ್ತಕ, ಪತ್ರಿಕೆಗಳ ಮೂಲಕ, (೨) ಶಿಕ್ಷಕರ ಮೂಲಕ (ನಿರ್ದಿಷ್ಟ ಅವಧಿಯ ವರೆಗೆ), (೩) ಶಿಶುಸಂರಕ್ಷಣೆಯ ಉಪಚಾರಸಂಶೋಧನದ ಮೂಲಕ, (೪) ಮಾತೃತ್ವಕ್ಕೆ ಸಂಬಂಧಿಸಿದ ಎಲ್ಲ ಶಾಲೆಗಳ ಶಿಕ್ಷಣದ ಮೂಲಕವೆಂದು ಹೀಗೆ ನಾಲ್ಕು ಬಗೆಯಿಂದ ಕೊಡಲ್ಪಡುವದು. ಇದಲ್ಲದೆ ದೈನಿಕ ಪ್ರಮುಖ ಪತ್ರಿಕೆಗಳು ಶಿಶುಪೋಷಣೆಯ ವಿಷಯವನ್ನು ಪ್ರಕಟಿಸಲು ಒಂದೊಂದು ಪುಟವನ್ನು ಮೀಸಲಾಗಿಟ್ಟಿರುವವು. ಮಕ್ಕಳನ್ನು ಹೆತ್ತು, ಸಾಕಿ ಸಲುಹಿ, ಅನುಭವ ಪಡೆದ ತಾಯಂದಿರೇ ಇಂಥ ಲೇಖನಗಳನ್ನು ಬರೆಯುವರಲ್ಲದೆ ಬಿರುದಾಂಕಿತ ಬಾಜೆಯರಿಂದ ಬರೆಯಲ್ಪಡುವದಿಲ್ಲ.

## ೨. ನರ್ಸರಿ.

ನರ್ಸರಿ—ಶಿಶುಗೃಹಗಳು ಹಳ್ಳಿಗಳಲ್ಲಿ ಹೆಚ್ಚಾಗಿವೆ. ಹಳ್ಳಿಗರು

ದುಡಿಯಲು ಹೋದಾಗ ಮಕ್ಕಳು ಚರಂಡಿಯ ಪಾಲಾಗಬಾರದೆಂದೂ, ಕೆಲಸಕ್ಕೆ ಅಡ್ಡಿಯಾಗಬಾರದೆಂದೂ ಸರಕಾರದವರು ಇಂಥವುಗಳನ್ನು ಏರ್ಪಡಿಸಿ ಶಿಶುಪೋಷಣೆಯನ್ನು ಮಾಡುವರು. ಪಟ್ಟಣಗಳಲ್ಲಿ ಸಹ ಕೂಲಿಕಾರರ ಮಕ್ಕಳಿಗಾಗಿಯೂ ಈ ಸೌಕರ್ಯವನ್ನು ಮಾಡಲಾಗಿದೆ. ಆದುದರಿಂದ ತಾಯಂದಿರು ಕೆಲಸಕ್ಕೆ ಹೋಗುವಾಗ ಮಕ್ಕಳಿಗೆ "ಅಫೀಮನ್ನು ತಿನ್ನಿಸಿ ನಿದ್ರೆಬರುವಂತೆ" ಮಾಡದೆ ಸುಖವಾಗಿ ಶಿಶುಗೃಹಗಳಲ್ಲಿ ಅವರನ್ನು ಬಿಟ್ಟು ಹೋಗುತ್ತಾರೆ. ಸರಕಾರದವರು ಪ್ರತಿವರ್ಷವು ಸುಮಾರಾಗಿ ೮೦೦೦ ತಾತ್ಕಾಲಿಕ ಶಿಶುಗೃಹಗಳನ್ನು ಏರ್ಪಡಿಸುವರಲ್ಲದೆ, ೧೯೩೬ರಲ್ಲಿ ೬೦೦ ಶಿಶುಗೃಹಗಳನ್ನು ಶಾಶ್ವತವಾಗಿ ಸ್ಥಾಪಿಸಿದ್ದಾರೆ. ಅವುಗಳಲ್ಲಿ ೫೩೩೭೭ ಮಕ್ಕಳು ಪೋಷಿಸಲ್ಪಡುವವು.

## ೩. ಕಿಂಡರಗಾರ್ಟನ್.

ಶಿಶುವಿಹಾರ— ೪ರಿಂದ ೬ ವರುಷದೊಳಗಿನ ಮಕ್ಕಳಿಗಾಗಿ ಸರಕಾರದವರು ೧೪೮೦ ಶಿಶುವಿಹಾರಗಳನ್ನು ಸ್ಥಾಪಿಸಿರುವರು. ಇವುಗಳಲ್ಲಿ ೧೪೩೪೬೯ ಮಕ್ಕಳು ಶಿಕ್ಷಣವನ್ನು ಪಡೆಯುತ್ತಲಿವೆ. ಕೇವಲ ಮಕ್ಕಳ ಶಿಕ್ಷಣವನ್ನು ಹೇಗೆ ಕೊಡಬೇಕೆಂಬ ೫೦ ಶಿಕ್ಷಕ ಶಾಲೆಗಳಿವೆ. ಗರ್ಲ್ಸ ಹೈಸ್ಕೂಲಿನಲ್ಲಿ ಉತ್ತೀರ್ಣರಾದ ತರುಣಿಯರಿಗೆ ಒಂದೆರಡು ವರುಷ ಇಲ್ಲಿ ಶಿಕ್ಷಣ ಕೊಟ್ಟು, ಈ ವಿಹಾರಗಳಲ್ಲಿ ಅವರನ್ನು ಶಿಕ್ಷಕರನ್ನಾಗಿ ನಿಯಮಿಸುವರು. ಈ ಶಾಲೆಗಳಲ್ಲಿ ಮುಖ್ಯವಾಗಿ ಆಟ, ಹಾಡು, ಬುದ್ಧಿಬೆಳೆಸುವ ಕೆಲಸ ಮೊದಲಾದವುಗಳನ್ನು ರೂಢಿಗೊಳಿಸಬೇಕೆಂಬ ಕಟ್ಟು ಇದೆ. ಇತ್ತೀಚೆಗೆ ಅನೇಕ ವಿದ್ವಾಂಸರು ಮಕ್ಕಳ ಮನೋವಿಜ್ಞಾನವನ್ನು ಅಭ್ಯಸಿಸಿ, ಅವರ ಶೀಲಸಂವರ್ಧನೆಗೆ ಚಿಕ್ಕಂದಿನಲ್ಲಿಯೇ ಗಮನಕೊಟ್ಟರೆ ಅವರು ಸುಪ್ರಜೆಗಳಾಗುವರೆಂದು ಭಾವಿಸಿ, ಇಂಥ ವಿಹಾರಗಳಿಗೆ ಹೆಚ್ಚಾಗಿ ಉತ್ತೇಜನವನ್ನು ಕೊಡತೊಡಗಿದ್ದಾರೆ. ಮಕ್ಕಳಿಗೆ ಆಟ-ನೋಟ, ಮೂಕಪ್ರಾಣಿ, ಹೂ-ಗಿಡ, ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಮೊದಲಾದ ವಿಷಯದಲ್ಲಿ ತುಂಬ ಪ್ರೀತಿಯಿರುತ್ತದೆಂಬದನ್ನರಿತುಕೊಂಡೇ ಉಪಾಧ್ಯಾಯರು ಅಂಥದೇ ಶಿಕ್ಷಣ

ವನ್ನು ಕೊಡುವರು. ಈ ರೀತಿ ಶಿಕ್ಷಣ ಪಡೆದ ಮಕ್ಕಳು ಒಳ್ಳೆ ಪ್ರಜೆಗಳಾಗುವರೆಂಬುದಕ್ಕೆ ಸಂದೇಹವೇ ಇಲ್ಲ.

ಮಕ್ಕಳು ತಮ್ಮನ್ನು ಮುದ್ದಿಸುವವರನ್ನು ಸಹಜವಾಗಿ ಪ್ರೀತಿಸುವವು. ಅವರ ಮಾತುಗಳನ್ನು ಕೇಳುವವು. ಅನುಕರಣ ಗುಣವು ಆನುವಂಶಿಕವೆಂಬಂತೆ ಅವರಲ್ಲಿ ಬೆಳೆಯುವದು. ಈ ಶಿಶುವಿಹಾರಗಳಲ್ಲಿ (೧) ಕೃತಜ್ಞತೆ, ಪವಿತ್ರತೆ, (೨) ಪ್ರೀತಿ, (೩) ಸಭ್ಯತೆ, (೪) ಆಜ್ಞಾಧಾರಕತೆ, (೫) ಸಹಾನುಭೂತಿ, (೬) ಔದಾರ್ಯ, (೭) ಗೆಳೆತನ, (೮) ದೀರ್ಘಪ್ರಯತ್ನ, (೯) ವ್ಯವಸ್ಥೆ, (೧೦) ಸ್ಪಷ್ಟೋಕ್ತಿ ಮತ್ತು ಶಿಷ್ಟಸಂಪ್ರದಾಯವೆಂಬ ಹತ್ತು ವಿಷಯಗಳನ್ನು ಕಲಿಸಬೇಕೆಂದು ಶಿಕ್ಷಕ-ಶಿಕ್ಷಕಿಯರಿಗೆ ಕಟ್ಟಪ್ಪಣೆಯಾಗಿದೆ.

ಟೋಕಿಯೋದಲ್ಲಿರುವ "ತೋವಾ ತೋಕಾಕೊ ಕ್ಯೋಟೇಶೋ' ಎಂಬ ಶಿಶುವಿಹಾರದಲ್ಲಿ ೩ರಿಂದ ೫ ವರುಷದ ೮೦ ಮಕ್ಕಳಿರುವವು. ಇವರ ಮಧ್ಯಾಹ್ನದ ಫಲಹಾರಕ್ಕಾಗಿ ಈ ೮೦ ಮಕ್ಕಳ ತಾಯಂದಿರು ಪ್ರತಿದಿನವು ೪ ಜನರಂತೆ ಶಾಲೆಗೆ ಬಂದು ಅಡಿಗೆ ಮಾಡಿ ಎಲ್ಲ ಮಕ್ಕಳಿಗೆ ಬಡಿಸುತ್ತಾರೆ. ಈ ತೆರದಿಂದ ಮಕ್ಕಳಿಗೆ ಸರಿಯಾದ ಆಹಾರವು ಸಿಗುವುದರಿಂದ ತಂದೆತಾಯಿಗಳಿಗೆ ಮಕ್ಕಳ ಆರೋಗ್ಯದ ಚಿಂತೆಯು ತಪ್ಪುವದು. ಜಪಾನಿನಲ್ಲಿ ಜಾತಿಭೇದವಿಲ್ಲದೆ ಈ ರೀತಿಯಾದ ಆಹಾರವು ಸುಲಭವಾಗಿ ದೊರೆಯುವದು. ಆದರೆ ನಮ್ಮ ಭಾರತದಲ್ಲಿರುವ ಬ್ರಾಹ್ಮಣ, ಬ್ರಾಹ್ಮಣೇತರ, ಮುಸಲ್ಮಾನ, ಕ್ರಿಶ್ಚಿಯನ್ನರೆಂಬ ತಿಕ್ಕಾಟದಲ್ಲಿ ಮೇಲ್ಕಾಣಿಸಿದ ಮಕ್ಕಳ ಸೌಕರ್ಯವನ್ನು ರೂಢಿಗೆ ತರುವದು ಅಸಾಧ್ಯವಾದ ಮಾತಾಗಿದೆ.

## ೩. ಪ್ರಾಥಮಿಕ ವಿದ್ಯಾಭ್ಯಾಸ.

೧೯೩೫ರ ಕೊನೆಗೆ ಜಪಾನದೊಳಗೆ ೪೬೧೩೮ ಶಾಲೆಗಳಿದ್ದವು. ಅವುಗಳಲ್ಲಿ ೨೫೭೭೧ ಪ್ರಾಥಮಿಕ ಶಾಲೆಗಳು. ೧೪೦೩೫೮೨೩ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಒಟ್ಟು ಸಂಖ್ಯೆಯಲ್ಲಿ ೧೧೨೩೨೦೭೬ ವಿದ್ಯಾರ್ಥಿ-ವಿದ್ಯಾ

ಥಿರ್ಸಿಯರು ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಪಡೆಯುವರು. ಪ್ರತಿ ವರುಷವು ಸರಾಸರಿ ೫೦ ಕೋಟಿ ಎನ್ನುಗಳು (೧ ಯೆನ್=೧೩ ಆಣೆ) ವಿದ್ಯಾಭ್ಯಾಸಕ್ಕೆ ವೆಚ್ಚವಾಗುವದರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ವೆಚ್ಚವೇ ೩೦ ಕೋಟಿಯಷ್ಟಾಗುವದು.

ಜಪಾನಿನಲ್ಲಿ ೬ರಿಂದ ೧೪ ವರುಷದೊಳಗಿನ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಒತ್ತಾಯದ ಶಿಕ್ಷಣವನ್ನು ಪಡೆಯಲೇಬೇಕೆಂಬ ರಾಜಶಾಸನವು ೧೮೭೬ರಿಂದ ವಿಧಿಸಲ್ಪಟ್ಟಿತು. ರೋಗಗ್ರಸ್ತರಾದ ಬಾಲ-ಬಾಲಿಕೆಯರನ್ನು ಬಿಟ್ಟು ಉಳಿದವರೆಲ್ಲರೂ ಶಿಕ್ಷಣ ಪಡೆಯಲೇಬೇಕು. ೧೯೩೫ರಲ್ಲಿ ಇಡೀ ಜಪಾನಿನಲ್ಲಿ ೧೧೧೫೦೮೨೪ ಶಾಲೆಗೆ ಹೋಗಲು ಅರ್ಹರಾದ (School age) ಮಕ್ಕಳಿದ್ದರು. ಇವುಗಳಲ್ಲಿ ಅನಾರೋಗ್ಯದ ೪೬೯೦೪ ಮಕ್ಕಳನ್ನು ಬಿಟ್ಟರೆ, ಉಳಿದೆಲ್ಲವು ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿದ್ದವು. ೧೦೦ಕ್ಕೆ ೯೯.೫೮ರಂತೆ ಮಕ್ಕಳು ಶಾಲೆಗೆ ಹೋಗುತ್ತಾರೆ. ಕಳೆದ ನಾಲ್ಕು ವರುಷಗಳಲ್ಲಿ ಪ್ರಾಥಮಿಕ ಶಾಲೆಗಳಿಗೆ ಮಕ್ಕಳು ಹೇಗೆ ಯಾವ ರೀತಿಯಲ್ಲಿ ಹೋಗುತ್ತಿದ್ದವೆಂಬುದನ್ನು ಕೆಳಗೆ ವಿವರಿಸಲಾಗಿದೆ:—

| ವರುಷ. | ಶಾ. ಹೋಗಲು ಅರ್ಹರಾದ ಮಕ್ಕಳ ಸಂಖ್ಯೆ. | ಶಾ. ಹೋಗುವ ಮಕ್ಕಳ ಸಂಖ್ಯೆ. | ಶಾ. ಹೋಗದಿರುವ ಮಕ್ಕಳು. | ಶಾ. ಹೋಗುವ ಮಕ್ಕಳ ಸಂಖ್ಯೆ ನೂರಕ್ಕೆ. |
|---|---|---|---|---|
| ೧೯೩೫ | ೧೧೧೫೦೮೨೪ | ೧೧೧೦೩೯೨೦ | ೪೬೯೦೪ | ೯೯.೫೮ |
| ೧೯೩೪ | ೧೧೦೨೪೫೩೨ | ೧೦೯೭೮೭೧೮ | ೪೫೮೧೪ | ೯೯.೫೮ |
| ೧೯೩೩ | ೧೦೭೫೪೯೬೨ | ೧೦೭೦೮೯೩೦ | ೪೬೦೩೨ | ೯೯.೫೭ |
| ೧೯೩೧ | ೧೦೧೦೫೯೪೧ | ೧೦೦೫೬೫೩೦ | ೪೯೪೧೧ | ೯೯.೫೧ |

ಪ್ರಜಾಸಂಖ್ಯೆಯು ಹೆಚ್ಚಿದಂತೆ ಉಪಾಧ್ಯಾಯರ ಸಂಖ್ಯೆಯೂ ಹೆಚ್ಚುತ್ತ ಹೋಗುತ್ತಲೇ ಇರುವುದು.

೧೯೩೫ರಲ್ಲಿ ಸರಕಾರವು ೬೭೭೩೧೨ ಎನ್ನುಗಳನ್ನು ವೆಚ್ಚಮಾಡಿ ೨೬೮೮ ಅಪರಾಧಿತ ಮಕ್ಕಳನ್ನು ೫೩ ಸುಶಿಕ್ಷಣ....ಕಾರಾಗೃಹದಲ್ಲಿ (Reformatories) ಸುಧಾರಿಸಿತು.

ಆರು ವರುಷದ ಒತ್ತಾಯದ ಪ್ರಾಥಮಿಕ ವಿದ್ಯಾಭ್ಯಾಸವು ಜಪಾನಿನಲ್ಲಿ ೬೦ ವರುಷಗಳಿಂದ ನಡೆದಿದೆ. ಆದರೂ ನೀಚ, ಕ್ರೂರ, ಲೋಭಿಗಳಾದ ಕೆಲವು ತಂದೆತಾಯಿಗಳು ಮಕ್ಕಳನ್ನು ಶಾಲೆಗೆ ಕಳುಹಿಸದೆ, ಅವರನ್ನು ದುಡಿಸಿಕೊಳ್ಳುವ ಪ್ರವೃತ್ತಿಯು ಇನ್ನೂ ಜೀವಂತವಿರುವದು. ಈ ಕೆಟ್ಟ ಪದ್ಧತಿಯನ್ನು ತಪ್ಪಿಸಲು ಸರಕಾರವು ೧೯೩೩ರಲ್ಲಿ "ಮಕ್ಕಳ ಹಿಂಸೆಯನ್ನು ತಪ್ಪಿಸುವ ಕಾಯದೆ"ಯೊಂದನ್ನು (The law for the prevention of child maltreatment) ಮಾಡಿತು. ಅನಾರೋಗ್ಯದ ಮಕ್ಕಳನ್ನು ಅಧಿಕಾರಿಗಳಿಂದ ಗುರುತಿಸಿ, ಆರೋಗ್ಯದಿಂದಿರುವ ಮಕ್ಕಳನ್ನು ಕಾಯದೆಯಂತೆ ಶಾಲೆಗೆ ಕಳುಹಿಸದಿರುವ ತಾಯಿತಂದೆಯರಾಗಲಿ, ಪೋಷಕರಾಗಲಿ ಶಿಕ್ಷೆಗೊಳಗಾಗುವರು ಎಂದು ಪ್ರಕಟನೆ ಹೊರಟಿತ್ತು. ೧೯೩೫ರಲ್ಲಿ ಕ್ರೂರ ಪೋಷಕರಿಂದ ೫೯೩ ಮಕ್ಕಳು ರಕ್ಷಿತವಾಗಿ ಶಾಲೆಗೆ ಕಳಿಸಲ್ಪಟ್ಟವು. ಪೋಷಕರಿಗೆ ನೂರು, ನೂರು ಎನ್ನುಗಳ ದಂಡನೆಯಾಯಿತು. ಬಡವರ ಮಕ್ಕಳ ವಿದ್ಯಾಭ್ಯಾಸದ ವೆಚ್ಚವನ್ನು ಸರಕಾರವೇ ಹೊತ್ತಿದೆ. ಬಡತಾಯಂದಿರಿಗಾಗಿಯೂ ಸರಕಾರವು ಸಾಕಷ್ಟು ವೆಚ್ಚಮಾಡುತ್ತಿರುವುದೂ ಉಂಟು. ತಾಯಂದಿರು ಗಟ್ಟಿಮುಟ್ಟಿಯಿದ್ದು, ಹೆಚ್ಚು ಮಕ್ಕಳನ್ನು ಹೆತ್ತು, ರಾಜ್ಯಕ್ಕೆ ನೆರವಾಗುವರೆಂಬ ನೆವದಲ್ಲಿ ಬಡಪಾಯಿಗಳು ರೋಗಕ್ಕೀಡು ಆದರೆ, ಅವರ ಆರೋಗ್ಯಕ್ಕೂ, ಆಹಾರಕ್ಕೂ ಜಪಾನ ಸರಕಾರವು ಸಹಾಯವನ್ನು ಮಾಡುತ್ತಲೇ ಬಂದಿದೆ. ಹೆಚ್ಚು ಮಕ್ಕಳನ್ನು ಹೆತ್ತವರಿಗೆ ಜರ್ಮನಿ, ಇಟಲಿಗಳಲ್ಲಿ ಬಹುಮಾನಗಳು ದೊರೆತಂತೆ ಇಲ್ಲಿ ದೊರೆಯುವದಿಲ್ಲ. ಆದರೂ ಸರಕಾರದವರು ಬಡತಾಯಂದಿರಿಗಾಗಿ ಅನೇಕ ಅನುಕೂಲತೆಗಳನ್ನು ಏರ್ಪಡಿಸಿದ್ದಾರೆ. ಬಡವ ತಾಯಿ-ಮಕ್ಕಳಿಗಾಗಿ ೧೯೩೭ರಿಂದ ಸರಕಾರವು ಮಾಡಿರುವ ಹಣದ ಸಹಾಯವನ್ನು ಇಲ್ಲಿ ಕಾಣಿಸಲಾಗಿದೆ:—

| ವರುಷ | ೧೩ ವ. ಒಳಗಿನ ಮಕ್ಕಳು. ಸಂಖ್ಯೆ. | ಸಹಾಯಕ ಹಣ (ಎನ್ನು) | ಅರ್ಬ್ಬಕೆಯ ತಾಯಂದಿರು. ಸಂಖ್ಯೆ | ಸಹಾಯಕ ಹಣ (ಎನ್ನು) | ಒಟ್ಟು. ಸಂಖ್ಯೆ | ಸಹಾಯಕ ಹಣ(ಎನ್ನು) |
|---|---|---|---|---|---|---|
| ೧೯೩೨ | ೬೩೧೪೦ | ೧೩೦೧೩೯೫ | ೧೩೫೨ | ೩೫೫೭೧ | ೬೪೪೯೨ | ೧೩೩೭೦೯೬ |
| ೧೯೩೩ | ೮೪೫೬೬ | ೧೯೮೪೭೨೩ | ೧೭೫೮ | ೫೮೦೯೮ | ೫೮೦೯೮ | ೨೦೪೨೮೨೧ |
| ೧೯೩೪ | ೯೧೯೪೬ | ೨೦೫೨೫೬೪ | ೯೯೯ | ೧೯೪೪೫ | ೧೯೯೪೫ | ೨೦೭೧೭೦೯ |

ಶಿಕ್ಷಣದ ಧ್ಯೇಯವು ಮಕ್ಕಳಿಗೆವಿದ್ಯೆಗಲಿಸಿ ಸಮಾಜದಲ್ಲಿ ಹೌದು ಎನಿಸಿಕೊಂಡು ಸ್ವತಂತ್ರತೆಯಿಂದ ಬದುಕುವಂತೆ ಮಾಡುವದಿದೆ. ಪಾಠಗಳ ಶಿಕ್ಷಣದಲ್ಲಿ ಆರೋಗ್ಯದ ಬಲಿಯಾಗದಂತೆ ನೋಡಿಕೊಳ್ಳಲಾಗಿದೆ.

(೧) ಸಾಮಾನ್ಯ (೨) ಹೆಚ್ಚಿನ ತರಗತಿ ಎಂಬವೆರಡು ಪ್ರಾಥಮಿಕ ಶಾಲೆಗಳಿವೆ. 'ಸಾಮಾನ್ಯ'ದರ ಅವಧಿ ಆರುವರುಷ. ಅಷ್ಟರಲ್ಲಿ ಮಕ್ಕಳು ನೀತಿಪಾಠ, ಜಪಾನಿ ಭಾಷೆ, ಗಣಿತ, ಜಪಾನಿ ಇತಿಹಾಸ, ಚಿತ್ರಕಲೆ, ಭೂಗೋಲ, ಶಾಸ್ತ್ರೀಯ ಪಾಠ, ಹಾಡುಗಾರಿಕೆ, ಹೊಲಿಗೆ, ಕಸರತ್ತು, ಮೊದಲಾದವುಗಳನ್ನು ಕಲಿಯುವವು. 'ಹೆಚ್ಚಿನ ತರಗತಿ'ಯ ಶಾಲೆಗಳಲ್ಲಿ ಈ ವಿಷಯಗಳಲ್ಲದೆ ಕೈಗಾರಿಕೆ, ವಿಶಿಷ್ಟ ವಿಷಯಗಳು, ಗೃಹವಿಜ್ಞಾನ ಮೊದಲಾದವು ಕಲಿಸಲ್ಪಡುವವು. ಇಂಥ ವಿದ್ಯೆಯನ್ನು ಗಳಿಸಿದ ಮಕ್ಕಳು ಕಚೇರಿಯ ತಿರುಗಲ ತಿಪ್ಪರಾಗದೆ ಸ್ವತಂತ್ರರಾಗಿ, ಸುಖವಾಗಿ, ಜೀವನ ಪಥವನ್ನು ಸಾಗಿಸುವವರಾಗುತ್ತಾರೆ.

ದೇಶಾಭ್ಯುದಯಕ್ಕೆಪ್ರಾಥಮಿಕ ವಿದ್ಯಾಭ್ಯಾಸವೇ ಮೂಲಾಧಾರವು. ಅದನ್ನು ಬೆಳೆಯಿಸಲು ಸರಕಾರವೂ, ಸಂಘ ಸಂಸ್ಥೆಗಳೂ ಹೆಣಗುತ್ತಲಿವೆ. ಪ್ರತಿಯೊಂದು ಶಾಲೆಯೂ ಮೂರು ನಾಲ್ಕು ಅಂತಸ್ತಿನದು. ಅದರಲ್ಲಿಯೇ ಚಿಕ್ಕ ಒಂದು ತಮಾಷೆಯ ಬಂಗಲೆ. ವ್ಯಾಯಾಮಕ್ಕಾಗಿ ದೊಡ್ಡದೊಂದು ಮೈದಾನು.—(ಇರಲೇಬೇಕೆಂಬ ಕಾಯಿದೆಯೂ ಇದೆ.) ವಿಶಾಲವಾದ ಆಟದ ಮೈದಾನವಿಲ್ಲದ ಶಾಲೆಯು ಜಪಾನಿನಲ್ಲಿ ಇಲ್ಲವೇ ಇಲ್ಲ. ಮೈದಾನ ವಿಲ್ಲದ ಶಾಲೆಯ ಸುತ್ತುಮುತ್ತಲಿನ ಸ್ಥಳದ ಯಜಮಾನರು ಮಕ್ಕಳಿಗೆ ಉಪಯೋಗವಾಗಲೆಂದು ತೀರ ಅತ್ಯಲ್ಪ ಬೆಲೆಗೆ ತಮ್ಮ ಸ್ಥಳಗಳನ್ನು

ಸರಕಾರಕ್ಕೆ ಕೊಟ್ಟು ಶಾಲೆಗೊಂದು ಪ್ರೈವಾಸುಮಾಡಿಕೊಡುವರು. ಶಾಲೆಯಲ್ಲಿಯ ಬಲಹೀನ ಮಕ್ಕಳ ಆರೈಕೆಗಾಗಿ ಕಲಿತ ಉಪಚಾರಿಕೆಯು ರಿರುತ್ತಾರೆ. ಆಸ್ಪತ್ರೆಯಂತೆ ಶಾಲೆಯಲ್ಲಿಯೂ ಮೂರು ನಾಲ್ಕು ಕಾಹಿಲೆ ಗಳ ಹಾಸುಗೆಗಳ ವ್ಯವಸ್ಥೆ ಇದೆ. ಅಧಿಕಾರಿಗಳೇ ಶಾಲೆಯಲ್ಲಿ ಪಥ್ಯಕರ ಪದಾರ್ಥಗಳನ್ನು ತಯಾರಿಸಿ ಸುಲಭ ಬೆಲೆಗೆ ಮಾರುತ್ತಾರೆ. ವಿನೋದ, ಚಾರಿತ್ರಿಕ, ಸೃಷ್ಟಿಸೌಂದರ್ಯ ಮೊದಲಾದ ಸ್ಥಳಗಳನ್ನು ನೋಡಲು ಉಪಾಧ್ಯಾಯರು ಮಕ್ಕಳನ್ನು ವಾರಕ್ಕೊಂದು ಸಲವಾದರೂ ಕರೆದು ಕೊಂಡು ಹೋಗುತ್ತಾರೆ. ವನಭೋಜನದ ಹುಚ್ಚಂತೂ ಜಪಾನಿನಲ್ಲಿ ಹೇಳತೀರದು. ವ್ಯಾಯಾಮ ಶಿಕ್ಷಣದ ಫಲವಾಗಿ ಇಂದಿನ ತರುಣ ತರುಣಿಯರು ತಮ್ಮ ಹಿರಿಯರಿಗಿಂತ ಹೆಚ್ಚು ಎತ್ತರವಾಗಿಯೂ ದೃಢ ಕಾಯರಾಗಿಯೂ ಬೆಳೆದಿರುವರೆಂದು ಕಂಡುಬಂದಿದೆ.

ಜಪಾನಿನ ಪ್ರಾಥಮಿಕ ಶಾಲೆಗಳಲ್ಲಿ ಮಾತ್ರ ಸಹವಿದ್ಯಾಭ್ಯಾಸವು (Co-education) ನಡೆಯುತ್ತಿದೆ. ಉಚ್ಚತರಗತಿಯ ಶಾಲೆಗಳಲ್ಲಿ ಇದಕ್ಕೆ ಪ್ರವೇಶವಿಲ್ಲ. ಆದರಿಂದ ಇಲ್ಲಿಯ ಗಂಡಸರು ಹೆಂಗಸರನ್ನು ಕೀಳಾಗಿ ಕಾಣುವರೆಂದು ಯಾರೂ ತಿಳಿಯಬಾರದು. ವಿದ್ಯಾರ್ಥಿಗಳ ಶಾಲೆಗಳಲ್ಲಿ ವಿದ್ಯಾರ್ಥಿನಿಯರಿಗೆ ಉಪಯುಕ್ತ ವಿಷಯಗಳನ್ನು ವಿಶದವಾಗಿ ಕಲಿಯಲು ಆಸ್ಪದವಿರುವದಿಲ್ಲ. ಆದುದರಿಂದ ವಿದ್ಯಾರ್ಥಿನಿಯರ ಶಾಲೆ ಗಳಲ್ಲಿಯೇ ಅವರು ಶಿಕ್ಷಣವನ್ನು ಪಡೆಯುವದು ಉತ್ತಮವೆಂದು ಭಾವಿಸಿ ಶಿಕ್ಷಣಕ್ರಮವನ್ನು ಜೇರ್ಪಡಿಸಿರುವರು. ಜೀವನಕ್ಕೆ ನಿರುಪಯೋಗವಾದ ವಿಷಯಗಳನ್ನು ಕಲಿಯಲು ಇಲ್ಲಿಯ ತರುಣಿಯರಿಗೆ ಆಸ್ಪದವೇ ಇರುವದಿಲ್ಲ.

ಸಹವಿದ್ಯಾಭ್ಯಾಸವಿದ್ದ (ಪ್ರಾಥಮಿಕ) ಶಾಲೆಗಳಲ್ಲಿ ಶಿಕ್ಷಿಕೆಯರಿ ಗಿಂತ ಶಿಕ್ಷಕರೇ ಹೆಚ್ಚು. ೧೯೩೫ರ ಕೊನೆಗೆ ಶಿಕ್ಷಕ-ಶಿಕ್ಷಿಕೆಯರ ಸಂಖ್ಯೆಯು ೨೯೫೨೪೫ ಇತ್ತು. ಅದರಲ್ಲಿ ೧೭೩೫೯೭ ಶಿಕ್ಷಕರು, ೭೮೯೯೭ ಶಿಕ್ಷಿಕೆಯರು ಇದ್ದರು.

ಕೆಲ ವರ್ಷಗಳ ಹಿಂದೆ ಪ್ರಾಥಮಿಕ ಶಾಲೆಗಳ ಶಿಕ್ಷಕ-ಶಿಕ್ಷಿಕೆಯರು ಶಾಲೆ ಬಿಟ್ಟಮೇಲೆ ಜೊತೆಯಾಗಿ ಹೋಗುತ್ತಿದ್ದರು. ಅದರ ಫಲವಾಗಿ ಮಕ್ಕಳ ಮನೋಭಾವವು ಬದಲಾಯಿತೆಂದು ಕಂಡುಬಂದುದರಿಂದ ೧೯೩೬ರಿಂದ ಸರಕಾರವು ಶಾಲೆಯ ಹೊರಗಡೆಯಲ್ಲಿ ಶಿಕ್ಷಕ-ಶಿಕ್ಷಿಕೆಯರು ಜೊತೆಯಾಗಿ ತಿರುಗಕೂಡದೆಂಬ ಕಾಯಿದೆಯನ್ನು ಮಾಡಿತು. ಒಂದು ವೇಳೆ ಶಿಕ್ಷಕ-ಶಿಕ್ಷಿಕೆಯರಲ್ಲಿ ಪ್ರಣಯಪ್ರಸಂಗ ಉಂಟಾದರೆ ಅವರಲ್ಲಿ ಒಬ್ಬರು ರಾಜಿನಾಮೆ ಕೊಡಬೇಕಾಗುವದು. ಹಾಗೆ ಮಾಡದಿದ್ದರೆ ಅವರಿಬ್ಬರನ್ನೂ ಸರಕಾರವು ಕೆಲಸದಿಂದ ತೆಗೆದುಹಾಕುವದು.

ಹಳ್ಳಿಯಲ್ಲಾಗಲೀ ಪಟ್ಟಣದಲ್ಲಾಗಲೀ ಉಪಾಧ್ಯಾಯರಿಗೆ ಮರ್ಯಾದೆ ಹೆಚ್ಚು. ಉಪಾಧ್ಯಾಯನು ತನಗೆ ಬಿಡುವು ದೊರೆತಾಗ ಹಳ್ಳಿಗರಿಗೆ ಸಂಬಂಧಿಸಿದ ದುಡ್ಡಿನ ವ್ಯವಹಾರವನ್ನು ಸುಲಭ ರೀತಿಯಿಂದ ತಿಳುಹಿಸಿಕೊಡುವನು. ಉಪಾಧ್ಯಾಯರ ‘ಫುಟ್ ಲಾಯರ್’ತನಕ್ಕೆ ಇಲ್ಲಿಯ ಹಳ್ಳಿಗಳಲ್ಲಿ ಆಸ್ಪದ ದೊರೆಯದು. ವಿದ್ಯಾವಂತರ ಸಂಖ್ಯೆಯು ಹೆಚ್ಚಿರುವದರಿಂದ ಈ ಶಿಕ್ಷಕವೃಂದವು ಬಹು ಸೂಕ್ಷ್ಮವಾಗಿ ನಡೆದುಕೊಳ್ಳುವದು. ಇವರ ಸಂಬಳ ತಿಂಗಳಿಗೆ ೪೦ರಿಂದ ೬೦ ರೂಪಾಯಿಗಳ ವರೆಗೆ. ಸಾಕಷ್ಟು ಸಂಬಳ ಸಿಗುವದರಿಂದ ಇವರು ಹಬ್ಬ-ಹುಣ್ಣಿಮೆ, ಪೂಜೆ-ಪುನಸ್ಕಾರ, ದಾನ-ಧರ್ಮಗಳಲ್ಲಿ ತೊಡಗಿ ಹಳ್ಳಿಗರನ್ನು ಪೀಡಿಸದೆ ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನವನ್ನೀಯುತ್ತಾರೆ.

ಅನೇಕ ತರುಣರು ಪಾಸಾಗದಿರುವದಕ್ಕೆ, ಕಳ್ಳರೂ, ಸುಳ್ಳರೂ, ಹೇಡಿಗಳೂ ಆಗುವದಕ್ಕೆ ಶಿಕ್ಷಕರೇ ಕಾರಣರೆಂದು ಒಂದರ್ಥದಿಂದ ಹೇಳಬಹುದಾಗಿದೆ. ಮಕ್ಕಳು ಕಲಿಯಬಂದಾಗ ಅವರಿಗೆ ಶಿಕ್ಷಕರು ಸರಿಯಾಗಿ ಮನಗೊಟ್ಟು ಬೋಧಿಸಿದ ಪಕ್ಷದಲ್ಲಿ ಅವರೇ ದೊಡ್ಡವರಾದ ಮೇಲೆ ಸಹಸಾ ಅಡ್ಡಹಾದಿಗೆ ಬೀಳಲಾರರು. ಇಲ್ಲಿಯ ಶಿಕ್ಷಕರು ಯಾವಾಗಲೂ ಹಸನ್ಮುಖಿಗಳಾಗಿ ಮಕ್ಕಳನ್ನು ಸಂತೋಷದಲ್ಲಿರಿಸುವರು. ಇವರು ಸಲ್ಲದ ಕಾರುಬಾರವನ್ನೆಂದೂ ಮಾಡಲಾರರು. ಸಮಯ

ಸಾಧಿಸಿದರೆ ನಾವೇ ಬೇಕಾದರೆ ಇದನ್ನು ಭಾರತದಿಂದ ಜಪಾನಿಗೆ ಅಟ್ಟಬಹುದು! ಶಿಕ್ಷಕರು ಬೆತ್ತವನ್ನೆಂದೂ ಉಪಯೋಗಿಸುವದಿಲ್ಲ. ಅದನ್ನು ಕೇಳಿ ನಮ್ಮ ಭಾರತೀಯ ಶಿಕ್ಷಕರು ಆಶ್ಚರ್ಯಪಡಬಹುದು. ಮಕ್ಕಳಿಗೆ ವಿದ್ಯೆ ಬರಬೇಕಾದರೆ ಬೆತ್ತದಿಂದಲೇ ಎಂಬ ನಮ್ಮ ಉಪಾಧ್ಯಾಯರ ಸಿದ್ಧಾಂತವು ಎಂದು ಮಾಯವಾಗುವದೋ ದೇವರೇ ಬಲ್ಲ! ಮಕ್ಕಳ ಕಿವಿ ಹಿಂಡುವದು, ಬಾಸಾಳ ಮೂಡುವಂತೆ ಹೊಡೆಯುವದು ಮೊದಲಾದ ಕ್ರೂರ ಕೃತಿಗಳು ಅವರ ಕನಸು-ಮನಸಿನಲ್ಲಿಲ್ಲ. ಕುಂಭಕರ್ಣನ ತಮ್ಮಂದಿರಾದ ನಮ್ಮ ಉಪಾಧ್ಯಾಯರು ಹೊತ್ತುಗಳೆಯಲು ಕಠಿಣ ಲೆಕ್ಕವನ್ನಾಗಲಿ, ವಾಕ್ಯರಚನೆಯನ್ನಾಗಲಿ ವಿದ್ಯಾರ್ಥಿಗಳಿಗೆ ಮಾಡಲು ಹೇಳಿ ತಾವು ಮೇಜಿನ ಮೇಲೆ ಕಾಲುಚಾಚಿ ನಿದ್ರಿಸುವ ಭಾಗ್ಯವು ಜಪಾನಿನ ಉಪಾಧ್ಯಾಯರಿಗೆ ಅಂಟಿಕೊಂಡಿರುವದಿಲ್ಲ.

ನಮ್ಮ ಭಾರತದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದಿಂದ ಮಕ್ಕಳ ಪ್ರಗತಿಯಾಗಬೇಕಾದರೆ, ಶಿಕ್ಷಕರ ಸಂಬಳವು ತೀರ ಕಡಿಮೆಯೆಂದರೆ ೪೦ ರೂಪಾಯಿಗಳಾಗಬೇಕು. ಹಣದ ತೊಂದರೆಯಿಂದ ಒಮ್ಮೆ ಪಾರಾದರೆಂದರೆ ಅದೇ ಶಿಕ್ಷಕರು ಮನಸುಗೊಟ್ಟು ಕಲಿಸಲಾರಂಭಿಸುವರು. ಇಲ್ಲವಾದರೆ ಈಗ ಕೊಡುವ ೧೫ ರೂಪಾಯಿಗಳಾದರೂ ವ್ಯರ್ಥವಾದಂತೆ. ಒಂದೇ ತೆರದ ಉಡುಪನ್ನು ಧರಿಸಬೇಕೆಂಬ ಕಟ್ಟಳೆಯಾಗಬೇಕು. ಮಕ್ಕಳ ಆಟಕ್ಕೆ ವಿಶಾಲವಾದ ಮೈದಾನೊಂದು ಪ್ರತಿಯೊಂದು ಶಾಲೆಗೆ ಇದ್ದೇ ತೀರಬೇಕು. ಸ್ವಾತಂತ್ರ್ಯಪ್ರಿಯತೆಯನ್ನು ಹೆಚ್ಚಿಸಿ, ದೇಶಭಕ್ತರಾಗುವಂಥ ಯೋಗ್ಯ ಶಿಕ್ಷಣವನ್ನು ಕೊಡಬೇಕು. ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚಾಗಿ ಶಿಕ್ಷಿಕೆಯರನ್ನು ನಿಯಮಿಸಬೇಕು. ಅದರಿಂದ ಮಕ್ಕಳು ನಮ್ರತೆಯಿಂದಲೂ, ಶಾಂತಿಯಿಂದಲೂ ವಿದ್ಯಾಭ್ಯಾಸಮಾಡಲನುವಾಗುವದು. ಸರಕಾರದವರು, ಪೌರಸಭೆಯವರು ಮಕ್ಕಳ ಮಧ್ಯಾಹ್ನದ ಆಹಾರಕ್ಕಾಗಿಯೂ, ಬಡಮಕ್ಕಳಿಗೆ ಹಾಲನ್ನು ಒದಗಿಸುವದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿಕೊಡಬೇಕು. ಶಾಲೆಯ ಅಂಗಳದಲ್ಲಿಯೇ ಶಿಕ್ಷಕರು ವಾಸಿಸುವಂತೆ ವ್ಯವಸ್ಥೆಯಾಗಬೇಕು. ಅಂದರೆ ಶಿಕ್ಷಣವು ಪ್ರಗತಿಪರ ದಾರಿಯನ್ನು ಹಿಡಿಯಿತೆನ್ನಬಹುದು.

ಶಿಕ್ಷಕರು ಮಮತೆಯಿಂದ ಕಲಿಸತೊಡಗಿದರೆ ನಮ್ಮ ಭಾರತೀಯ ಮಕ್ಕಳೂ ಸಹ, ಇಲ್ಲಿಯವರಂತೆ ಶಾಲೆಯ ಗೋಡೆ, ಬೆಂಚುಗಳ ಮೇಲೆ ಪೂರ್ಣ ಪ್ರೀತಿಹಾಸಗಳ ಕೆತ್ತನೆಯನ್ನು ನಿಲ್ಲಿಸುವರು. "ಶಾಲೆಯು ಮಕ್ಕಳದು" ಎಂಬ ತತ್ವವು ಮನವರಿಕೆಯಾದರೆ ಅವೂ ಸಹ ಸ್ವಂತ ವಸ್ತುವನ್ನು ರಕ್ಷಿಸುವಂತೆ ನೋಡತೊಡಗುವವು. "ಮನಸ್ಸಿದ್ದರೆ ಮಹಾದೇವ"ನೆಂಬಂತೆ ಶಿಕ್ಷಕರು, ಅಧಿಕಾರಿಗಳು ಮಕ್ಕಳೊಡನೆ ಸಹಕರಿಸಿದರೆ, ಅವರು ವಿದ್ಯಾವಂತರೂ, ಶೂರರೂ, ಸದಾಚಾರಸಂಪನ್ನರೂ ಆಗಿ ಇಡೀ ದೇಶವೇ ಅಭಿವೃದ್ಧಿಗೊಳ್ಳುವದು. ಆದರೆ ಭಾರತದಲ್ಲಿ ಅಂಥ ಸುದಿನವು ಎಂದಿಗೆ ಉದಯವಾಗುವದೋ ಏನೋ!

## ೪. ಮಾಧ್ಯಮಿಕ ವಿದ್ಯಾಭ್ಯಾಸ—Middle School.

ಒತ್ತಾಯದ ಶಿಕ್ಷಣವನ್ನು ಮುಗಿಸಿದ ಹುಡುಗ-ಹುಡುಗಿಯರಲ್ಲಿ ನೂರಕ್ಕೆ ೮, ೧೦ರಂತೆ ಮಾಧ್ಯಮಿಕ ಶಾಲೆಗಳನ್ನು ಸೇರುವರು. ಹುಡುಗಿಯರು ಸೇರುವ ಶಾಲೆಗಳಿಗೆ "Girls' High School" ಎಂದು ಹೆಸರು. (ಹುಡುಗರ ಮಾಧ್ಯಮಿಕ ಶಾಲೆಗಳ ಅಂತಸ್ತಿನಷ್ಟಿದ್ದರೂ ಹುಡುಗಿಯರ ಮಾಧ್ಯಮಿಕ ಶಾಲೆಗಳಿಗೆ ಹೈಸ್ಕೂಲುಗಳೆಂದು ಕರೆಯುವರು. ಯಾಕೆ ಎಂಬದನ್ನು ಮುಂದೆ ವಿವರಿಸಲಾಗುವದು.) ಹುಡುಗರಿಗಿಂತ ಹುಡುಗಿಯರೇ ಹೆಚ್ಚಾಗಿ ಉಚ್ಚಶಿಕ್ಷಣವನ್ನು ಕಲಿಯಲು ಕಾರಣವೆಂದರೆ, ಮಹಾಯುದ್ಧವು ಮುಗಿದ ಮೇಲೆ ಇಲ್ಲಿಯವರ ಆರ್ಥಿಕ ಸ್ಥಿತಿಯು ಸುಧಾರಿಸಿದ ದ್ಯೋತಕವೆಂದು ಹೇಳಬಹುದಾಗಿದೆ.

ಹುಡುಗರ ಮಾಧ್ಯಮಿಕ ಶಾಲೆಗಳ ಶಿಕ್ಷಣದ ಅವಧಿಯು ಐದು ವರುಷ ಮಾತ್ರ. ಈ ಶಿಕ್ಷಣದ ಧ್ಯೇಯವಾದರೂ ಶೂರರೂ, ಸ್ವತಂತ್ರಪ್ರಿಯರೂ ನೀತಿಪರರೂ ಆಗುವಂತೆ ಮಾಡುವದಿದೆ. ಈ ಶಾಲೆಗಳಲ್ಲಿ ನೀತಿ, ದೇಶಿಯ ಭಾಷೆ, ಚೀನಿಯರ ಭಾಷೆ, ಇತಿಹಾಸ, ಭೂಗೋಲ, ಪರದೇಶದ ಭಾಷೆ (ಇಂಗ್ಲಿಷ, ಜರ್ಮನ್ ಅಥವಾ ಫ್ರೆಂಚ್), ಗಣಿತ, ವಿಜ್ಞಾನ, ಚಿತ್ರಕಲೆ, ಮರಗೆಲಸ, ಹಾಡುಗಾರಿಕೆ, ಕೈಗಾರಿಕೆ, ವ್ಯಾಪಾ

ರದ ಪಾಠಗಳು ಕಲಿಸಲ್ಪಡುತ್ತಿವೆ. ೪, ೫ನೇ ವರುಷಗಳಲ್ಲಿ, ಹುಡುಗರು ಇಷ್ಟಪಡುವ ವಿಷಯಗಳನ್ನು ವಿಶೇಷವಾಗಿ ಕಲಿಸಲಾಗುವದು. ಅದರಿಂದ ಆಯಾ ವಿದ್ಯಾರ್ಥಿಗಳು ಐಚ್ಛಿಕ ವಿಷಯಗಳಲ್ಲಿ ಪರಿಣತಿಯನ್ನು ಹೊಂದುವರು. ಶಿಕ್ಷಣವು ಮುಗಿದ ಮೇಲೆ ಕೆಲಸವು ಸಿಗದಿದ್ದರೆ ಸ್ವತಂತ್ರವಾಗಿ ದುಡಿಯಲು ಕಲಿತ ವಿದ್ಯೆಯು ಸಹಕಾರಿಯಾಗುವದು.

ಈ ಮಾಧ್ಯಮಿಕ ಶಾಲೆಗಳಲ್ಲಿ ಇಂಗ್ಲಿಷ ಭಾಷೆಯನ್ನು ಪ್ರತಿಯೊಬ್ಬನೂ ಕಲಿಯಬೇಕೆಂದು ಒತ್ತಾಯವಿರುವುದು. ಶಿಕ್ಷಕರು ಇಂಗ್ಲೀಷ ಭಾಷೆಯ ಅನೇಕ ಪುಸ್ತಕಗಳನ್ನು ಜಪಾನಿಯಲ್ಲಿ ಭಾಷಾಂತರಿಸಿ ವಿಷಯಗಳನ್ನು ತಿಳಿದುಕೊಳ್ಳಲು ವಿದ್ಯಾರ್ಥಿಗಳಿಗೆ ಸಹಾಯಮಾಡುವರು. ವಿದಾರ್ಥಿಗಳಿಗೆ ಇಂಗ್ಲಿಷ ಭಾಷೆಯ ಮೂಲಕ ಪರದೇಶಗಳ ವಿಷಯವನ್ನು ಓದಲು ಶಕ್ತಿ ಸಾಲದಿದ್ದರೂ ಅನುವಾದಿತ ಪುಸ್ತಕಗಳಿಂದ ವಿಷಯ ಸಂಗ್ರಹವನ್ನು ಮಾಡಿಕೊಳ್ಳುತ್ತಾರೆ. ಇಂಗ್ಲಂಡ, ಅಮೇರಿಕಾ, ಅಥವಾ ಇನ್ನಾವ ದೇಶದಲ್ಲಿಯೇ ಆಗಲಿ ಯೋಗ್ಯ ಪುಸ್ತಕವು ಪ್ರಕಟವಾದ ಸುದ್ದಿಯು ಬಂದ ಎರಡು ತಿಂಗಳೊಳಗಾಗಿಯೇ ಆ ಪುಸ್ತಕವನ್ನು ಭಾಷಾಂತರಿಸಿ ಅದರ ಜ್ಞಾನವನ್ನು ಹರಡದೆ ಜಪಾನಿಯರು ಎಂದಿಗೂ ಬಿಡರು. ಪ್ರಪಂಚದ ಜ್ಞಾನವು ಲಭಿಸಲೆಂದು ಪ್ರತಿಯೊಬ್ಬನೂ ಹತ್ತಾರು ವರುಷ ಪರಭಾಷೆಯನ್ನು ಕಲಿಯಬೇಕಾದ ಅವಶ್ಯಕತೆಯಿಲ್ಲ. ಅದಕ್ಕಾಗಿಯೇ ಬಲ್ಲವರಾದವರು ಸ್ವಭಾಷೆಗೆ ಪರಿವರ್ತಿಸಿ ಪುಸ್ತಕಗಳನ್ನು ಪ್ರಕಟಿಸುವುದರಿಂದ ಅನೇಕಾನೇಕರಿಗೆ ಬೇಕಾದಷ್ಟು ಸಹಾಯವಾಗುವುದು. ಇಲ್ಲಿಯ ವಿದ್ಯುಚ್ಛಕ್ತಿಯನ್ನು ನಡೆಯಿಸುವ ಮುಖ್ಯ ನಾಯಕನಿಗೆ ಪರಭಾಷೆಯ ಗಂಧವಿಲ್ಲದೆಯೂ ಕೂಡ ಅವನು ವಿಜ್ಞಾನವನ್ನು ತನ್ನ ಸ್ವಭಾಷೆಯಲ್ಲಿಯೇ ತಿಳಿದುಕೊಂಡು ಸ್ವತಂತ್ರನಾಗಿ ಕಾರ್ಯವನ್ನು ಸಾಗಿಸುವ ಸಾಮರ್ಥ್ಯವನ್ನು ಪಡೆದಿರುವನು. ಅದರಂತೆಯೆ ಪರಭಾಷೆಯರಿಯದ ಅನೇಕ ಜಪಾನಿಯರು ಜಪಾನಿ ಭಾಷೆಯಿಂದಲೇ ಕಲಿತುಕೊಂಡು ಹಲವು ತರದ ಕೈಗಾರಿಕೆಗಳನ್ನು ಉತ್ಕೃಷ್ಟವಾಗಿ ಸಾಗಿಸುತ್ತಲಿರುವರು.

ಈ ಶಾಲೆಯಲ್ಲಿ ಉಪಾಧ್ಯಾಯರಾಗಬೇಕಾದರೆ ವಿದ್ಯಾಖಾತೆಯ ಮಂತ್ರಿಗಳಿಂದ ಸನದುಪತ್ರವನ್ನು ಪಡೆದುಕೊಂಡು ವೃತ್ತಿಯನ್ನು ಪ್ರಾರಂಭಿಸಬೇಕಾಗುವುದು. ಮಾಧ್ಯಮಿಕ ಶಾಲೆಗಳ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ:—

| ವರುಷ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳಸಂಖ್ಯೆ |
|---|---|---|
| ೧೯೩೫ | ೫೫೫ | ೩೩೦೯೯೨ |
| ೧೯೩೪ | ೫೫೪ | ೩೨೭೨೬೧ |
| ೧೯೩೩ | ೫೫೮ | ೩೨೯೪೫೯ |
| ೧೯೩೨ | ೫೫೬ | ೩೩೬೧೮೬ |
| ೧೯೩೧ | ೫೫೨ | ೩೯೫೬೯೧ |

ಈ ಶಾಲೆಗಳಲ್ಲಿ ಸೈನಿಕ (Military) ಶಿಕ್ಷಣವು ಒತ್ತಾಯವಾಗಿರುತ್ತದೆ. ವಾರದಲ್ಲಿ ನಾಲ್ಕು ತಾಸಾದರೂ ವಿದ್ಯಾರ್ಥಿಗಳು ಸೈನಿಕ ಶಿಕ್ಷಣವನ್ನು ಪಡೆಯಲೇಬೇಕು. ಗಟ್ಟಿಮುಟ್ಟಿಯಾದ ವಿದ್ಯಾರ್ಥಿಗಳು ಸೈನಿಕ ಶಿಕ್ಷಣ ಪರೀಕ್ಷೆಯಲ್ಲಿ ಉತ್ತೀರ್ಣರಾಗದಿದ್ದರೆ, ಅವರು ಮೇಲಿನ ತರಗತಿಗೆ ಹಾಕಲ್ಪಡುವದಿಲ್ಲ.

## ೫. ಕೊಕೋಗಕ್ಕೊ (ಇಂಟರ್ ಮಿಡಿಯೇಟ್ ಅಂತಸ್ತು).

ಮಾಧ್ಯಮಿಕ ಶಿಕ್ಷಣದ ನಂತರ ವಿದ್ಯಾರ್ಥಿಗಳು ಕೊಕೋಗಕ್ಕೊ ಶಾಲೆಗಳಿಗೆ ಹೋಗಬೇಕಾಗುವದು. ಇಲ್ಲಿಯ ಶಿಕ್ಷಣದ ಅವಧಿಯು ಮೂರು ವರುಷ. "ಕೋಕೊಗಕ್ಕೊ" ವಿದ್ಯಾಭ್ಯಾಸದ ಧ್ಯೇಯವಾದರೂ ವಿದ್ಯಾರ್ಥಿಗಳಿಗೆ ಸಾಮಾನ್ಯವಿದ್ಯೆಯ ಸಂಪೂರ್ಣ ಜ್ಞಾನವನ್ನು ಒದಗಿಸುವದಿದೆ. (The higher School is primarily an institution whose object is to complete the general education of young men) ಹೈಯರ್ ಶಾಲೆಯಲ್ಲಿ ತೇರ್ಗಡೆಯಾದರೆ ಮುಂದೆ ವಿಶ್ವವಿದ್ಯಾಲಯಗಳಿಗೆ ಸೇರಬೇಕಾಗುವದು.

ಹೈಯರ್ ಸ್ಕೂಲಿಗೆ ಸೇರಲು ಪ್ರವೇಶ ಪರೀಕ್ಷೆಯೊಂದಿದೆ. ಅದರಲ್ಲಿ ಪಾಸಾದವರಿಗೆ ಮಾತ್ರ ಪ್ರವೇಶವು ದೊರೆಯುವದು. ವಿದ್ಯಾರ್ಥಿಗಳ ಈ ಶಾಲೆಯಲ್ಲಿ ವಿದ್ಯಾರ್ಥಿನಿಯರಿಗೆ ಪ್ರವೇಶವಿಲ್ಲ. ಇಲ್ಲಿಯೂ ಸೈನಿಕ ಶಿಕ್ಷಣವು ಒತ್ತಾಯವಾಗಿದೆ. ಹೈಯರ್ ಶಾಲೆ ಮತ್ತು ವಿದ್ಯಾರ್ಥಿಗಳ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ:—

| ವರುಷ. | ಹೈಯರ್ ಸ್ಕೂಲುಗಳ ಸಂಖ್ಯೆ. | ವಿದ್ಯಾರ್ಥಿಗಳು. |
|---|---|---|
| ೧೯೩೫ | ೪೬೪ | ೧೯೮೦೩೦ |
| ೧೯೩೪ | ೪೬೯ | ೧೯೫೩೯ |
| ೧೯೩೩ | ೪೬೭ | ೧೯೪೪೯೦ |
| ೧೯೩೨ | ೪೫೪ | ೧೯೧೨೪೦ |
| ೧೯೩೧ | ೪೬೧ | ೧೯೧೪೪೧ |

## ೬. ಔದ್ಯೋಗಿಕ ಶಾಲೆಗಳು (Technical Schools).

ಆರು ವರುಷದ ಒತ್ತಾಯದ ಶಿಕ್ಷಣ ಮತ್ತು ಐದು ವರುಷದ ಮಾಧ್ಯಮಿಕ ಶಿಕ್ಷಣವನ್ನು ಪಡೆದವರು ಈ ಶಾಲೆಗೆ ಸೇರಲು ಅರ್ಹರಾಗುವರು. ಇಲ್ಲಿಯ ಶಿಕ್ಷಣದ ಅವಧಿಯು ೩-೪ ವರುಷಗಳು. ವಿದ್ಯಾರ್ಥಿಗಳಿಗೆ ನಾನಾ ತೆರದ ಉದ್ಯೋಗಗಳ ಪ್ರತ್ಯಕ್ಷ ಜ್ಞಾನವನ್ನು (Practical knowledge) ಮಾಡಿಕೊಟ್ಟು ಸ್ವತಂತ್ರ ಜೀವಿಗಳನ್ನಾಗಮಾಡುವದೇ ಈ ಶಾಲೆಗಳ ಮುಖ್ಯ ಗುರಿಯಾಗಿದೆ. ಉದ್ಯೋಗಗಳಿಗೆ ತಕ್ಕ ಜ್ಞಾನವನ್ನು ಒದಗಿಸಿಕೊಡುವ ಸೌಕರ್ಯವನ್ನು ಸ್ವತಂತ್ರವಾಗಿ ಶಾಲೆಯವರೇ ಏರ್ಪಡಿಸಿಕೊಂಡಿದ್ದಾರೆ. ವಿದ್ಯಾರ್ಥಿನಿಯರ ಸಲುವಾಗಿ ಪ್ರತ್ಯೇಕವಾದ ಇಂಥ ಶಾಲೆಗಳೂ ಇವೆ.

ಕೈಗಾರಿಕೆಯು ದೇಶದಲ್ಲಿ ಅಭಿವೃದ್ಧಿಗೊಂಡಂತೆ ಔದ್ಯೋಗಿಕ ಶಾಲೆಗಳಲ್ಲಿ ಉಪಕರಣಗಳನ್ನು ತಯಾರಿಸುವ ಕಾರ್ಯವು ಭರದಿಂದ ಸಾಗುವದು. ವಿಜ್ಞಾನದ ಸಹಾಯದಿಂದ ಹೊಸ ಹೊಸ ಸುಧಾರಿತ ಉಪಕರಣಗಳು ಹುಟ್ಟತೊಡಗುವವು. ಕೈಗಾರಿಕೆಗಳು ಲಾಭದಾಯಕ

ವಾಗುವಂತೆ ಸರಕಾರವೂ ಕೂಡ ಸಾಕಷ್ಟು ಹಣದ ಸಹಾಯವನ್ನು ಒದಗಿಸುತ್ತಲಿರುವದು. ಔದ್ಯೋಗಿಕ ಶಾಲೆ ಮತ್ತು ವಿದ್ಯಾರ್ಥಿಗಳ ಸಂಖ್ಯೆಯು ಕೆಳಗಿನಂತಿದೆ:—

| ವರುಷ. | ಔದ್ಯೋಗಿಕ ಶಾಲೆಗಳ ಸಂಖ್ಯೆ. | ವಿದ್ಯಾರ್ಥಿಗಳ ಸಂಖ್ಯೆ. |
|---|---|---|
| ೧೯೩೫ | ೧೦೬೯ | ೩೪೨೯೧೪ |
| ೧೯೩೪ | ೧೦೪೧ | ೩೧೬೮೪೬ |
| ೧೯೩೩ | ೧೦೨೪ | ೩೦೦೧೧೯ |
| ೧೯೩೨ | ೧೦೦೩ | ೨೯೨೦೧೫ |
| ೧೯೩೧ | ೯೭೫ | ೨೮೮೬೮೧ |

ಈ ಶಾಲೆಗಳಲ್ಲದೆ ಸರಕಾರದವರು ಇನ್ನೂ ಬೇರೆ ತರಹದ ಶಾಲೆಗಳನ್ನು ತೆರೆದಿದ್ದಾರೆ. (೧) ನಾವಿಕ ಶಿಕ್ಷಣ ಶಾಲೆ (Nautical Training Institute). ಇಲ್ಲಿ ಎರಡು ವರುಷಗಳ ಶಿಕ್ಷಣಕ್ರಮವಿದೆ. ಹಡಗುಗಳನ್ನು ನಡೆಯಿಸುವ ರೀತಿ, ಸ್ಥಳಗಳನ್ನು ಕಂಡುಹಿಡಿಯುವದು ಮೊದಲಾದ ವಿಷಯಗಳನ್ನು ಕಲಿಸಲಾಗುವದು. ಇಲ್ಲಿ ತೇರ್ಗಡೆಯಾದವರು ಜಪಾನಿನ ಸಂಚಾರ ಹಡಗುಗಳಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾರೆ. ಇಲ್ಲಿ ಹಡಗಿನ ಎರಡು ದೊಡ್ಡ ಸಂಸ್ಥೆಗಳಿರುವುದರಿಂದ ಈ ಶಾಲೆಯಲ್ಲಿ ತೇರ್ಗಡೆಯಾದವರಿಗೆ ನಿರುದ್ಯೋಗದ ಸಮಸ್ಯೆಯು ಬಾಧಿಸುವದಿಲ್ಲ. (೨) ವಸಹಾತು ಮಾಡಲು ಕಲಿಸುವ ಶಾಲೆ (The Training Institute of Colonization). ಪರದೇಶಗಳಿಗೆ ಹೋಗಿ ವ್ಯವಸಾಯದಲ್ಲಿ, ಮೀನು ಹಿಡಿಯುವದರಲ್ಲಿ ನಿಷ್ಣಾತರಾಗುವ ಶಿಕ್ಷಣವನ್ನು ಕೊಡುವುದಕ್ಕಾಗಿ ಜಪಾನ ಸರಕಾರವು ಎರಡು ಶಾಲೆಗಳನ್ನು ಸ್ಥಾಪಿಸಿದೆ. ಇಲ್ಲಿ ಜಪಾನಿಯರು ಪರದೇಶಗಳಿಗೆ ಹೋಗಿ ನೆಲೆಸುವ ಪ್ರದೇಶದ ವಾತಾವರಣಕ್ಕೆ ತಕ್ಕಂತೆ ಆಚಾರ ವಿಚಾರಗಳ ಬಗ್ಗೆ, ಆರ್ಥಿಕ ಪ್ರಯೋಜನತೆಯ ಬಗ್ಗೆ ಶಿಕ್ಷಣವು ಕೊಡಲಾಗುವುದು. ಪ್ರತಿ ವರುಷ ಸಾವಿರಾರು ಜನರು ಇಲ್ಲಿ ಶಿಕ್ಷಣವನ್ನು ಹೊಂದಿ ಪರದೇಶಗಳಲ್ಲಿ ನೆಲೆಸಲು ಹೋಗುತ್ತಾರೆ. ಹೀಗೆ ಹೋಗುವವರಿಗೆ ತಮ್ಮ ದೇಶದ (ಜಪಾನಿನ) ಗೌರವ, ಕೀರ್ತಿ,

ಅಭಿಮಾನಗಳನ್ನು ಎಲ್ಲ ರೀತಿಯಿಂದಲೂ ಕಾಪಾಡಿಕೊಂಡಿರಬೇಕೆಂದು ಉಪದೇಶಿಸುವರು.

## ೭. ಪ್ರೌಢ ಶಿಕ್ಷಣ (Higher Education).

ಹೈಸ್ಕೂಲುಗಳಲ್ಲಿ ಕಲಿಸಲು ಸುರಿತ ಶಿಕ್ಷಕರನ್ನು ಪ್ರೌಢ ಶಿಕ್ಷಣದಲ್ಲಿ ತಯಾರಿಸಲು ಸರಕಾರದವರು ೨೫೪ ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಹೈಸ್ಕೂಲು, ಮಿಡಲ್ ಸ್ಕೂಲುಗಳ ವಿದ್ಯಾರ್ಥಿಗಳಿಗೆ ಹೇಗೆ, ಯಾವ ರೀತಿಯಿಂದ ಪಾಠಗಳನ್ನು ಹೇಳಿಕೊಡಬೇಕೆಂಬ ಶಿಕ್ಷಣವನ್ನು ಇಲ್ಲಿ ಮೂರು ವರುಷಗಳ ವರೆಗೆ ಕೊಡಲಾಗುವದು. ೧೯೩೦ರ ಕೊನೆಗೆ ೨೫೪ ಕಾಲೇಜುಗಳಲ್ಲಿ ೧೬೯೦೩೮ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯುತ್ತಿದ್ದರು.

## ೮. ವಿಶ್ವವಿದ್ಯಾನಿಲಯಗಳು (Universities).

ವಿಶ್ವವಿದ್ಯಾನಿಲಯಗಳಿಗೆ ಜಪಾನಿಯ ಭಾಷೆಯಲ್ಲಿ "ದೈಗಾಕು" (Daigaku) ಎಂದೆನ್ನುವರು. 'ದೈಗಾಕು' ಎಂದರೆ ಶ್ರೇಷ್ಠವಿದ್ಯಾಪೀಠವೆಂದರ್ಥವಿದೆ. (*A university is an institution established for the purpose of imparting essential knowledge in those theoretical and practical Sciences which are indespensable to the state, and for the purpose of undertaking minute research in various branches of sciences, as well as of building individual characters and fostering the formation of the national spirit.) ವಿಶ್ವವಿದ್ಯಾನಿಲಯಗಳಲ್ಲಿ ಎಲ್ಲ ತರದ ವಿದ್ಯಾರ್ಜನೆಗೆ (Several faculties)

---

* Department of Education:—A general survey of education in Japan.

ಅವಕಾಶವಿದೆ. ಆದರೂ ಒಂದೆರಡೇ ವಿಷಯುಗಳ ಸಲುವಾಗಿಯೇ ಸ್ಥಾಪಿಸಿರುವ ವಿಶ್ವವಿದ್ಯಾನಿಲಯುಗಳೂ ಇವೆ.

ಹೈಯರ್ ಸ್ಕೂಲುಗಳಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಮಾತ್ರ ವಿಶ್ವವಿದ್ಯಾನಿಲಯುಗಳಲ್ಲಿ ಪ್ರವೇಶವು ದೊರೆಯುವದು. ಬಹಳೇ ವಿದ್ಯಾರ್ಥಿಗಳು ಇಲ್ಲಿ ಸೇರಬಯಸುವದರಿಂದ ಪ್ರವೇಶವು ದುರ್ಲಭವಾಗುವದು. ಆದಕ್ಕಾಗಿ ಒಮ್ಮೊಮ್ಮೆ ಎರಡೆರಡು ವರುಷಗಳ ವರೆಗೆ ದಾರಿ ಕಾಯಬೇಕಾಗುವದು. ಜಪಾನಿನಂಥ ಸಣ್ಣ ದೇಶದಲ್ಲಿ ೪೫ ವಿಶ್ವವಿದ್ಯಾನಿಲಯುಗಳಿವೆ. ಇವುಗಳಲ್ಲಿ ೭೦ ಸಾವಿರ ವಿದ್ಯಾರ್ಥಿಗಳು ಅಭ್ಯಸಿಸಲು ಸ್ಥಳವಿದೆ. ಆದರೂ ಪ್ರತಿ ವರುಷವೂ ಸ್ಥಳದ ಅಭಾವಕ್ಕಾಗಿ ಸಾವಿರಾರು ಅರ್ಜಿಗಳು ನಿರಾಕರಿಸಲ್ಪಡುವವು. ವಿಶ್ವವಿದ್ಯಾನಿಲಯುದವರು ಮಾರ್ಚ ತಿಂಗಳಿನಲ್ಲಿ ಪ್ರವೇಶ ಪರೀಕ್ಷೆಯುನ್ನು ತೆಗೆದುಕೊಳ್ಳುವರು. ಬಲು ಕಠಿಣತಮವಾದ ಪರೀಕ್ಷೆಯಾಗುವದು. ಸ್ಥಳವಿದ್ದಷ್ಟು ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶವು ದೊರೆಯುವದು. ಉದಾಹರಣೆಗಾಗಿ—ಪ್ರತಿ ವರುಷವು ಟೋಕಿಯೋ ಸರಕಾರದ ವಾಣಿಜ್ಯ ವಿಶ್ವವಿದ್ಯಾನಿಲಯುದಲ್ಲಿ ಶಿಕ್ಷಣವನ್ನು ಪಡೆಯಲು ೩೦೦೦ ಅರ್ಜಿಗಳು ಬರುತ್ತವೆ. ಆದರೆ ಸ್ಥಳದ ಅಭಾವಕ್ಕಾಗಿ ಅಧಿಕಾರಿಗಳು ಕಠಿಣತರವಾದ ಪ್ರವೇಶ ಪರೀಕ್ಷೆಯುನ್ನು ನಡೆಯಿಸಿ ೭೫೦ ಅರ್ಜಿಗಳನ್ನು ಮಾತ್ರ ಸ್ವೀಕರಿಸಿ, ಉಳಿದವುಗಳನ್ನು ನಿರಾಕರಿಸುವರು.

ಸರಕಾರಿಯು ಅಥವಾ ಸಾರ್ವಜನಿಕ ವಿಶ್ವವಿದ್ಯಾನಿಲಯುದಲ್ಲಿಯೇ ಆಗಲಿ ಒಮ್ಮೆ ಪ್ರವೇಶವು ದೊರೆತರೆ ಸಾಕು—ವಿದ್ಯಾರ್ಥಿಗಳು ಕಷ್ಟಬಟ್ಟು ಪದವೀಧರರಾಗಿಯೇ ಹೊರಬೀಳುವರು. ಪದವೀಧರರಾಗುವುದೆ ತಡ, ಕೆಲಸವು ಸಿಕ್ಕೇಸಿಗುವದು. ಇವರಿಗೆ ನಿರುದ್ಯೋಗದ ಸಮಸ್ಯೆಯಿಲ್ಲ. ಭಾರತದ ಪದವೀಧರರು ನಿರುದ್ಯೋಗ ಸಮಸ್ಯೆಯಿಂದ ಬಳಲುವದನ್ನು ಕೇಳಿ ಜಪಾನದ ಪದವೀಧರರು ಆಶ್ಚರ್ಯಗೊಂಡಿರುವರು. ಇಲ್ಲಿಯ ವಿಶ್ವವಿದ್ಯಾನಿಲಯುಗಳಲ್ಲಿ ವಿದ್ಯಾರ್ಥಿಗಳ ಕನೆಯ ವರುಷದ

ಪರೀಕ್ಷೆಯ ಪರಿಣಾಮದ ಆರು ತಿಂಗಳ ಮೊದಲೇ ಸರಕಾರದ ಕಚೇರಿಗಳಲ್ಲಿ ಇಲ್ಲವೆ ವ್ಯಾಪಾರದ ಸಂಸ್ಥೆಗಳಲ್ಲಿ ಕೆಲಸ ಮಾಡಬೇಕೆಂಬ ವಿಷಯವು ನಿರ್ಧರಿಸಲ್ಪಡುತ್ತದೆ. ವಿಶ್ವವಿದ್ಯಾನಿಲಯಗಳ ಅಧಿಕಾರಿಗಳೇ ವಿದ್ಯಾರ್ಥಿಗಳಿಗೆ ಒಗ್ಗುವಂಥ ಕೆಲಸವನ್ನು ಅವರು ಪದವೀಧರರಾಗುವ ಮುಂಚಿತವಾಗಿಯೇ ಕೊಡಿಸಿಬಿಡುವರು. ವಿಶ್ವವಿದ್ಯಾನಿಲಯ ಸೇರುವದರಿಂದ ಕೆಲಸವು ಕಟ್ಟಿಟ್ಟ ಕಾರಣದಿಂದ ವಿದ್ಯಾರ್ಥಿಗಳ ಸಂಖ್ಯೆಯು ಮಿತಿಮೀರಿ ಬೆಳೆದಿದೆ.

ಇಲ್ಲಿಯ ಪದವೀಧರರ ಸಂಬಳವು ಆರಂಭದಲ್ಲಿಯೇ ತಿಂಗಳೊಂದಕ್ಕೆ ೮೦ ಎನ್ನುಗಳಿಂದ ೧೦೦ ಎನ್ನುಗಳ ವರೆಗೆ ಸಿಗುವದು. ಮೂರು ವರುಷಗಳಾದ ಮೇಲೆ ಸಂಬಳವು ನೂರಕ್ಕೆ ೨೫ರಂತೆ ಹೆಚ್ಚಾಗುವದು. ಹಿಂದುಸ್ಥಾನದಲ್ಲಿ ವಸೂಲಿ, ಲಂಚ, ಆಪ್ತತ್ವ ಮೊದಲಾದ ಅನ್ಯಾಯದ ಪರಮಾವಧಿಗಳ ಸಹಾಯವನ್ನು ಪಡೆಯದಿದ್ದರೆ ಕೆಲಸವು ದೊರೆಯುವದೇ ಇಲ್ಲ. ಆದರೆ ಅದೇ ಜಪಾನಿನಲ್ಲಿ ಇಂಥ ಅನ್ಯಾಯಕ್ಕೆ ಅವಕಾಶವೇ ಇರುವದಿಲ್ಲ. ಅವರವರ ಪದವಿಗೆ ತಕ್ಕಂತೆ ಕೆಲಸಗಳು ಅನಾಯಾಸವಾಗಿ ದೊರೆಯುವವು. ಇಲ್ಲಿಯ ವಿಶ್ವವಿದ್ಯಾನಿಲಯಗಳು ಪದವೀಧರರಲ್ಲಿ ತರಗತಿಯ ಭೇದವನ್ನು ಮಾಡುವದಿಲ್ಲ. ಅವರೆಲ್ಲರು ಸರಿಸಮಾನತ್ವದ ವಿದ್ಯಾವಂತರೆಂದು ಗಣಿಸಲ್ಪಡುತ್ತಾರೆ.

ಇಲ್ಲಿ ವಿದ್ಯಾರ್ಥಿಗಳು ಮೂರು ವರುಷಗಳಲ್ಲಿ ೩೦ ವಿಷಯಗಳಲ್ಲಿ (Subjects) ಉತ್ತೀರ್ಣರಾಗಿ, ಸಮಸ್ಯೆಯನ್ನೂ (Thesis) ಬರೆದು ಕೊಡುವ ವಿದ್ಯಾರ್ಥಿಗಳೇ ಪದವಿಯನ್ನು ಪಡೆಯಬಲ್ಲರು. ಮಾರ್ಚಿ ತಿಂಗಳಿನಾರಂಭದಲ್ಲಿ ಪರೀಕ್ಷೆಗಳು ನಡೆಯುವವು. ೩ನೆಯ ವರುಷದ ವಿದ್ಯಾರ್ಥಿಗಳು ಹಲವು ವಿಷಯಗಳಲ್ಲಿ ತೇರ್ಗಡೆಯಾಗದಿದ್ದಲ್ಲಿ ಅಂಥವರ ಪರೀಕ್ಷೆಯನ್ನು ಮತ್ತೊಮ್ಮೆ ಜುಲೈ ತಿಂಗಳಿನಲ್ಲಿ ತೆಗೆದುಕೊಳ್ಳುವರು. ಕೆಲಸಮಾಡುವ ಸ್ಥಳಗಳು ಈ ಮೊದಲೇ ನಿರ್ಣಯವಾಗಿರುವದರಿಂದ ವಿದ್ಯಾರ್ಥಿಗಳು ಬಹು ಶ್ರಮಬಟ್ಟು ಉತ್ತೀರ್ಣರಾಗಿಯೇ ತೀರುವರು.

ಇಲ್ಲಿಯ ಎಲ್ಲ ವಿದ್ಯಾಸಂಸ್ಥೆಗಳು ಎಪ್ರಿಲ ತಿಂಗಳಿಗೆ ಪ್ರಾರಂಭ ವಾಗಿ ಮಾರ್ಚ ತಿಂಗಳ ಕೊನೆಯ ವರೆಗೆ ನಡೆಯಿಸಲ್ಪಡುವವು. ಇಲ್ಲಿಯ ಬೇಸಿಗೆಯು ಭಾರತಕ್ಕಿಂತ ಕಡುತರವಾದುದರಿಂದ ವಿದ್ಯಾಸಂಸ್ಥೆಗಳು ಜುಲೈ ೧೧ರಿಂದ ಸಪ್ಟಂಬರ ೧೦ರ ವರೆಗೂ, ಚಳಿಗಾಲವೂ ವಿಪರೀತ ವಾಗಿರುವದರಿಂದ ಡಿಶಂಬರ ೨೦ರಿಂದ ಜನವರಿ ೧೦ರ ವರೆಗೂ ಮುಚ್ಚಲ್ಪಡುವವು. ವರುಷದ ಒಟ್ಟು ದಿನಗಳಲ್ಲಿ ಶಾಲೆಗಳು ರಾಷ್ಟ್ರೀಯ ಹಬ್ಬಗಳಿಗಾಗಿ (National holidays) ೧೦ ಸಲ ಮುಚ್ಚುವವು. ವಿವಿಧ ಜಾತಿಯ ಹಬ್ಬಗಳಿಗಾಗಿ ಶಾಲೆಗಳು ಮೇಲಿಂದ ಮೇಲೆ ಮುಚ್ಚಲ್ಪಡುವದಿಲ್ಲ. ಜಪಾನಿಯರಲ್ಲಿ ನೂರಕ್ಕೆ ೯೦ ಬೌದ್ಧ ಧರ್ಮಗಳಿರುವವು. ಇವರ ಹಬ್ಬಕ್ಕಾದರೂ ಇಲ್ಲಿಯ ಶಾಲೆಗಳಿಗೆ ರಜೆ ದೊರೆಯುವದಿಲ್ಲ.

ಈ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳೂ ಒಂದೇ ತರಹದ ಉಡುಪನ್ನು ಧರಿಸುತ್ತಾರೆ. ಈ ಉಡುಪನ್ನು ಧರಿಸಿದ ವಿದ್ಯಾರ್ಥಿಗಳು ಭಾರತ ದೇಶದ ರೇಲ್ವೆಗಾರ್ಡರಂತೆ ಕಾಣಿಸುವರು. ಎರಡು ವರುಷಗಳ ಹಿಂದೆ ಮೈಸೂರ ಸಂಸ್ಥಾನದ ನಿವೃತ್ತ ಇಂಜನಿಯರಾದ ಶ್ರೀಮಾನ್ ಕರ್ವೆಯವರು ಟೋಕಿಯೊಕ್ಕೆ ಬರುವೆನೆಂದು ತಿಳಿಸಿದ್ದರು. ಆಗ ಅವರನ್ನು ಸ್ವಾಗತಿಸಲು ಈ ಪುಸ್ತಕದ ಗ್ರಂಥಕರ್ತನು ವಿಶ್ವವಿದ್ಯಾನಿಲಯದ ಉಡುಪಿನಲ್ಲಿಯೇ ಹೋಗಿದ್ದನು. ಶ್ರೀ. ಕರ್ವೆಯವರು ರೈಲಿನಿಂದಿಳಿದು ಗ್ರಂಥಕರ್ತನನ್ನು ನೋಡಿದರು. ಯಾವನೋ ಪರದೇಶದವನು ಜಪಾನಿನ ರೇಲ್ವೆ ಕೆಲಸದಲ್ಲಿರತಕ್ಕವನೆಂದು ಭಾವಿಸಿ ಮಾತನಾಡಿಸದೆ ಹಿಂದುಮುಂದೆ ನೋಡುತ್ತಲಿದ್ದರು. ಗ್ರಂಥಕರ್ತನೇ ಅವರೇ ಶ್ರೀ. ಕರ್ವೆಯವರೆಂದು ತರ್ಕಿಸಿ, ಅವರಿಗೆ ಹೆಸರು-ದಶೆಗಳನ್ನು ಹೇಳಿದಾಗ ಅವರು ಈ ಉಡುಪನ್ನು ಕಂಡು ರೇಲ್ವೆಗಾರ್ಡನೆಂದು ಭಾವಿಸಿ ಮಾತನಾಡಿಸಲಿಲ್ಲೆಂದು ಹೇಳಿದರು. ವಿದ್ಯಾರ್ಥಿಗಳ ಉಡುಪಿಗೆ ಇಲ್ಲಿ ಬಹು ಮರ್ಯಾದೆಯಿದೆ. ಸಂದರ್ಭಕ್ಕನುಸರಿಸಿ ವಿವಿಧ ಉಡುಪುಗಳನ್ನು ಧರಿಸಿ ಸಂತೋಷ ಕೂಟ, ದುಃಖಕೂಟಗಳಿಗೆ ಹೋಗಬೇಕೆಂಬ ರೂಢಿಯೂ ಜಪಾನಿನಲ್ಲಿದೆ. ಆದರೆ ವಿದ್ಯಾರ್ಥಿಗಳ ಉಡುಪಿನಿಂದ ತೊಂದರೆಯಿಲ್ಲದೆ ಬೇಕಾದಲ್ಲಿಗೆ

ಹೋಗಬಹುದು. ವಿದ್ಯಾರ್ಥಿಗಳು ತಮ್ಮ ಉಡುಪಿನಲ್ಲಿಯೇ ಚಕ್ರವರ್ತಿಗಳ ದರ್ಶನವನ್ನು ತೆಗೆದುಕೊಳ್ಳಲು ಆಸ್ಪದವಿದೆ. ರೇಲ್ವೆ ಪ್ರಯಾಣ ಮಾಡುವಾಗ ಈ ಉಡುಪನ್ನು ಧರಿಸಿ, ಶಾಲೆಯ ಪ್ರವೇಶ ಪತ್ರಿಕೆಯನ್ನು ತೋರಿಸಿದರೆ ನೂರಕ್ಕೆ ೩೦ರಂತೆ ರಿಯಾಯಿತಿಯು ಒಂಟಿಯಾದ ವಿದ್ಯಾರ್ಥಿಗೂ ಸಿಗುವದು. ಹಿಂದುಸ್ಥಾನದಲ್ಲಿ ರೇಲ್ವೆ ರಿಯಾಯಿತಿಯು ದೊರೆಯಬೇಕಾದರೆ ಕನಿಷ್ಠ ನಾಲ್ಕು ಜನರಾದರೂ ಪ್ರಯಾಣ ಮಾಡಬೇಕು ಎಂಬಂಥ ಕಟ್ಟಳೆಯು ಜಪಾನಿನಲ್ಲಿರುವದಿಲ್ಲ. ರೇಲ್ವೆ ದರಗಳೂ ಸುಲಭವಿರುವವು; ಮೇಲಾಗಿ ರಿಯಾಯಿತಿ ದೊರೆಯುವದರಿಂದ ವಿದ್ಯಾರ್ಥಿಗಳಿಗೆ ದೇಶದ ತುಂಬ ಸಂಚರಿಸಲು ಬಹು ಅನುಕೂಲವಾಗಿರುವದು. ಉಡುಪು ತೊಟ್ಟ ೭೫, ೨೬ ವಯಸ್ಸಿನ ವಿದ್ಯಾರ್ಥಿಗಳ ನೀತಿಯು ಕೆಡಬಾರದೆಂದು ರಾತ್ರಿ ವಿಹಾರ, (Night club) ನರ್ತನಮಂದಿರ (Dancing hall)ಗಳಲ್ಲಿ ಇವರಿಗೆ ಪ್ರವೇಶ ದೊರೆಯಲು ಆಸ್ಪದವಿರುವದಿಲ್ಲ. ಯಾಕೆಂದರೆ ಇವರ ಚಲನವಲನವನ್ನು ನೋಡಿಕೊಳ್ಳಲು ನೂರಾರು ಪೊಲೀಸರನ್ನು ಇಡಲಾಗಿದೆ.

ಒತ್ತಾಯವಾಗಿ ಕಲಿಸುವ ಆಂಗ್ಲಭಾಷೆಯನ್ನು ೧೧ ವರ್ಷಗಳ ವರೆಗೆ ಪ್ರತಿಯೊಬ್ಬನೂ ಕಲಿಯುವನು. ವಿದ್ಯಾರ್ಥಿಗಳು ಇದರ ಜೊತೆಗೆ ಜರ್ಮನ್, ಫ್ರೆಂಚ್, ಸ್ಪ್ಯಾನಿಶ್ ಮೊದಲಾದ ಭಾಷೆಗಳಲ್ಲೊಂದು ಐಚ್ಛಿಕವಾಗಿ ಅಭ್ಯಾಸಿಸುವರು. ಸಾಧಾರಣವಾಗಿ ವಿದ್ಯಾರ್ಥಿಗಳು ೨-೩ ಪಶ್ಚಿಮ ಭಾಷೆಗಳನ್ನು ಬರೆಯಬಲ್ಲರು; ಮಾತನಾಡಬಲ್ಲರು. ಹಲವು ಭಾಷೆಗಳ ಪರಿಜ್ಞಾನದಿಂದ ವಿದ್ಯಾರ್ಥಿಗಳಿಗೆ ವಿಷಯಸಂಗ್ರಹವು ಹೆಚ್ಚಾಗುವದು. ವಿದ್ಯಾರ್ಥಿಗಳಲ್ಲದ ಹಲವು ಜಪಾನಿಯರು ಹೆಚ್ಚು ಸಂಪರ್ಕವಿರುವ ಅಮೇರಿಕೆಯೊಡನೆ ಇಂಗ್ಲಿಷ ಭಾಷಾದ್ವಾರದಿಂದ ವ್ಯಾಪಾರವನ್ನು ಸಾಗಿಸುತ್ತಾರೆ. ಪರದೇಶದ ಜ್ಞಾನವನ್ನು ಮಾಡಿಕೊಡುವದಕ್ಕೆ ಜಪಾನಿನಲ್ಲಿ ಇಂದಿಗೂ ನೂರಾರು ಪರದೇಶದ ಬೋಧಕರಿರುವರು. (ಭಾಷೆಗಳನ್ನು ಬೋಧಿಸುವದಕ್ಕಲ್ಲ).

ಮಹಾಮಹೋಪಾಧ್ಯಾಯರು (Professors) ತಮಗೆ ಅನುಭವ

ವಿಲ್ಲದ ವಿಷಯಗಳ ಮೇಲೆ ಉಪನ್ಯಾಸವನ್ನು ಕೊಡುವದಿಲ್ಲ. ಏಶಿಯಾ ಖಂಡದ ಭೂಗೋಲವನ್ನು ಕಲಿಸಬೇಕಾದರೆ, ಇಂಡಿಯಾ, ಚೈನಾ, ಸಯಾಮು ಮೊದಲಾದ ಎಲ್ಲ ದೇಶಗಳಲ್ಲಿ ಸಂಚರಿಸಿ, ಅನುಭವವನ್ನು ಪಡೆದಂಥವನೆ ಉಪನ್ಯಾಸಕೊಡುವನಲ್ಲದೆ ಪುಸ್ತಕಪಂಡಿತನು ಎಂದೂ ಕೊಡಲಾರನು. ವಿದ್ಯಾರ್ಥಿಗಳು ಅನುಭವಿಕ ಜ್ಞಾನವನ್ನು ಪಡೆಯುವದರಿಂದ ಅವರ ಜೀವನದ ಉನ್ನತಿಗೂ, ದೇಶದ ಹಿತಕ್ಕೂ ಅಪಾರವಾದ ಲಾಭವಾಗುತ್ತದೆ. ಆದುದರಿಂದ ಸರಕಾರವು ಅಂಥವರನ್ನೇ ನಿಯಮಿಸಿಕೊಳ್ಳುವದು.

ಜಪಾನಿಯರಿಗೆ ೩೦ ವರುಷಗಳ ಹಿಂದೆ ಇಂಗ್ಲಿಷ ಭಾಷೆಯ ಜ್ಞಾನವಿಲ್ಲದ್ದರಿಂದ ಅವರ ವ್ಯಾಪಾರವು ಪರದೇಶೀಯರ ಕೈಯ್ಯಲ್ಲಿತ್ತು. ಆದರೆ ಈಗ ವಾಣಿಜ್ಯ ಸಂಸ್ಥೆಗಳು ಅಂತರ್ ರಾಷ್ಟ್ರೀಯ ವ್ಯವಹಾರವನ್ನು ಹಿಡಿತದಲ್ಲಿ ತಂದಂದಿನಿಂದ ವ್ಯವಹಾರವು ಜಪಾನಿಯರ ಸ್ವಾಧೀನವಾಗಿದೆ. ಜಪಾನಿಯರು ಪರದೇಶಿಯರಿಂದ ಕೈಗಾರಿಕೆಗಳನ್ನು ಕಲಿತು, ಅವರಿಗಿಂತ ಮಿಗಿಲಾದ ಪದಾರ್ಥಗಳನ್ನು ತಯಾರಿಸಿ, ಅವರಿಗೇ ಅಗ್ಗವಾಗಿ ಮಾರುತ್ತಿದ್ದಾರೆ. ಅದರಂತೆಯೆ ಪರಕೀಯರಿಂದ ವ್ಯಾಪಾರದ ಗುಟ್ಟನ್ನರಿತು, ಪರಕೀಯರಿಗೇ ಆದರ್ಶಪ್ರಾಯರಾದ ಜಪಾನಿಯರನ್ನು ಕಂಡು ಬಲು ಆಶ್ಚರ್ಯವಾಗುವದು. ಜಪಾನಿಯರ ವ್ಯವಹಾರದ ರೀತಿಗಳನ್ನು ಕಲಿಯಲು ಅಮೇರಿಕದ ಅನೇಕ ವ್ಯಾಪಾರ ಸಂಸ್ಥೆಗಳು ತಮ್ಮ ಕಾರಕೂನರನ್ನು ಜಪಾನಕ್ಕೆ ಕಳಿಸುತ್ತಾರೆ. ವಾಣಿಜ್ಯವಿಶ್ವವಿದ್ಯಾನಿಲಯದ ಪದವೀಧರರಲ್ಲಿ ನೂರಕ್ಕೆ ೮೦ ರಂತೆ ಜಗತ್ತಿನ ಬೇರೆ ಬೇರೆ ಪ್ರದೇಶದಲ್ಲಿ ನೆಲೆಸಿ ಜಪಾನಿಯ ವ್ಯಾಪಾರವನ್ನು ಹೆಚ್ಚಿಸುತ್ತಲಿರುವರು. ಇಂಥ ಪದವೀಧರರು ಹಿಂದುಸ್ಥಾನವೊಂದರಲ್ಲಿಯೇ ೧೫೦ ಜನರಿರುವರು.

ಮುಂಬೈ, ಕರಾಚಿ, ಮದ್ರಾಸ, ಕಲ್ಕತ್ತಾ ಮೊದಲಾದ ಪಟ್ಟಣಗಳಲ್ಲಿ ನೂರಾರು ಜಪಾನಿಯರು ಕಣ್ಣಿಗೆ ಬೀಳುವರು. ಅಂತರ್ ರಾಷ್ಟ್ರೀಯ ವ್ಯಾಪಾರದಲ್ಲಿ ಭಾರತವು ಸರಾಸರಿ ಜಪಾನಿನಷ್ಟೆ ನೂರಕ್ಕೆ

ಮೂರೂವರೆಯಷ್ಟು ರಫ್ತು-ಆಮದು ವ್ಯಾಪಾರವನ್ನು ಪರದೇಶಗಳ ವ್ಯಾಪಾರಸಂಸ್ಥೆಯು ಮುಖಾಂತರವಾಗಿ ನಡೆಸುತ್ತಲೇ ಇದೆ. ಇದರಿಂದ ಭಾರತಕ್ಕೆ ಆಗುವ ಹಾನಿಯು ಅಷ್ಟಿಷ್ಟಲ್ಲ. ಭಾರತೀಯ ವ್ಯಾಪಾರವು ಭಾರತೀಯರಿಂದಲೇ ನಡೆಯಿಸಲ್ಪಡುವ ದಿನಗಳು ಎಂದು ಬರುವವೋ ನೋಡಬೇಕು. ದೇಶಕ್ಕೆ ಕೈಗಾರಿಕೆಯ ಅಗತ್ಯ ಎಷ್ಟಿರುವದೋ ಅಷ್ಟೇ ವ್ಯಾಪಾರವೂ ಇದೆ. ವ್ಯಾಪಾರವು ಭರದಿಂದ ಸಾಗುತ್ತಿದ್ದರೆ ಆರ್ಥಿಕ ಮುಗ್ಗಟ್ಟು ಎಲ್ಲಿಂದ ಬರಬೇಕು?

ಪದವೀಧರರಾಗುವ ಮೊದಲೇ ಕೆಲಸ ಮಾಡುವ ಸ್ಥಳಗಳು ಗೊತ್ತಾಗುವದರಿಂದ ವಿದ್ಯಾರ್ಥಿಗಳು ಅಭ್ಯಾಸ ಮಾಡುವದಿಲ್ಲೆಂದು ತಿಳಿದು ಅಧಿಕಾರಿಗಳು ಕೆಲಸದ ವಿವರಗಳನ್ನು ಅವರಿಗೆ ತಿಳಿಸಬಾರದೆಂದು ಯೋಚಿಸುತ್ತಲಿರುವರು.

ಇಲ್ಲಿಯ ಸರಕಾರದ ನೌಕರದಾರರಿಗೆ ಸಿಗುವ ಸಂಬಳವು ಕಡಿಮೆ ಯಾದರೂ ಎಲ್ಲರೂ ಸರಿಸಮಾನ ಸಂಬಳವನ್ನು ಪಡೆಯುವರು. ಇಲ್ಲಿಯ ಮುಖ್ಯ ಮಂತ್ರಿಯು ಏನು ಬೇಕಾದುದನ್ನು ಮಾಡಬಲ್ಲ ಶಕ್ತಿಯುತ ನಾದ ಸರ್ವಾಧಿಕಾರಿಯಂತಿದ್ದರೂ, ಅವನ ಸಂಬಳವು ತಿಂಗಳೊಂದಕ್ಕೆ ೮೦೦ ಎನ್ನುಗಳು ಮಾತ್ರ. ಅವನು ಇಷ್ಟು ಕಡಿಮೆ ಸಂಬಳವನ್ನು ದೇಶಸೇವೆಯಾಗಲೆಂದೇ ತೆಗೆದುಕೊಳ್ಳುವನಲ್ಲದೆ ಬೇರೆ ಮತ್ತೇನೂ ಇಲ್ಲ. ಜೀವನ ಸಾಗಿಸುವದಕ್ಕೆ ಸಾಲುವಷ್ಟೆ ಸಂಬಳವನ್ನು ತೆಗೆದುಕೊಂಡು ದೇಶಸೇವೆಯನ್ನು ಸಲ್ಲಿಸುವ ಮಹನೀಯರಿರುತ್ತಾರೆ. ಹೆಚ್ಚು ಸಂಬಳ ಪಡೆದು ಕೆಲಸ ಮಾಡಿದರೆ, ಅದು ಹಣದಾಸೆಗಾಗಿ ಸಲ್ಲಿಸಿದ ಸೇವೆಯಲ್ಲದೆ ದೇಶಕ್ಕಾಗಿ ಅಲ್ಲವೆಂದು ಧಾರಾಳವಾಗಿ ಹೇಳಬಹುದು. ಇಂದು ಜಪಾನವು ಪ್ರಥಮ ಶ್ರೇಣಿಯ ರಾಷ್ಟ್ರವೆಂದು ಮೆರೆಯುತ್ತಿದ್ದರೂ, ಅಲ್ಲಿ ೨-೩ ಸಾವಿರ ರೂಪಾಯಿ ಸಂಬಳ ದೊರೆಯುವ ಒಬ್ಬ ಜಪಾನೀ ಯನೂ ದೊರೆಯಲಾರನು. ಸಂಬಳವು ಕಡಿಮೆಯಾದರೆ ಅಧಿಕಾರಿಗಳು ಲಂಚಬುರುಕರಾಗುವದರಿಂದ ದೇಶವು ಹಾಳಾಗುತ್ತದೆಂದು ಕೆಲವರು

ಆಕ್ಷೇಪಿಸುವರು. ೮೦೦ ಎನ್ನುಗಳ ಸಂಬಳವುಳ್ಳ ರಾಷ್ಟ್ರದ ಸೂತ್ರಧಾರಿಯ ಆಡಳಿತೆಯಲ್ಲಿ ಜಪಾನದೇಶವು ಮುಂದುವರಿಯುತ್ತಿರುವದಾದರೂ ಹೇಗೆ? ಎಂಬ ಸಂಶಯವುಂಟಾಗದಿರದು. ಇದಕ್ಕೆ ಸಮಾಧಾನವೆಂದರೆ, ಇಲ್ಲಿಯವರು ದೇಶಹಿತ, ದೇಶಸೇವೆಗಾಗಿ ಕಡಿಮೆ ಸಂಬಳದಿಂದ ತೃಪ್ತರಾಗಿ ಕೆಲಸ ಮಾಡುವರು. ಹಿಂದುಳಿದ ರಾಜ್ಯಗಳ ದೇಶಭಕ್ತರಾದ ಅಧಿಕಾರಿಗಳು ಹಣಕ್ಕೋಸುಗ ದುಡಿಯುವ ಅಧಿಕಾರಿಗಳನ್ನು ಕೂಡಲೇ ತಳ್ಳಬೇಕು. ಅಂದರೆ ಅಂಥ ರಾಜ್ಯಗಳು ಮುಂದೆ ಬರುವವು. ಜಪಾನದ ಆದಾಯವು ವರ್ಷಕ್ಕೆ ೨೫೦ ಕೋಟಿ ಎನ್ನುಗಳಿದ್ದು, ಚಕ್ರವರ್ತಿಗಳು ತಮ್ಮ ವೆಚ್ಚಕ್ಕೆಂದು ಸರಕಾರಿಯ ತಿಜೋರಿಯಿಂದ ೪೦ ಲಕ್ಷ ಎನ್ನುಗಳನ್ನು ಮಾತ್ರ ಸ್ವೀಕರಿಸುತ್ತಾರೆ. ಹಿಂದುಳಿದ ರಾಜ್ಯದ ರಾಜರು ಆದಾಯದ ಬಹು ಭಾಗವನ್ನು ತಾವೇ ಭೋಗಿಸುವರು. ಅರಸರು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರೆ, ಅಧಿಕಾರಿಗಳು ಕೂಡ ಅದರಂತೆಯೆ ವರ್ತಿಸುವದರಲ್ಲಿ ಸಂದೇಹವಿಲ್ಲ. ಸಾಧಾರಣವಾಗಿ ವಿಶ್ವವಿದ್ಯಾನಿಲಯದ ಪದವೀಧರರು ಸರಕಾರದ ಕೆಲಸಗಳಲ್ಲಿ ತೊಡಗುವದಕ್ಕಿಂತ ಕಾರಖಾನೆ, ಸಾರ್ವಜನಿಕ ವ್ಯಾಪಾರಸಂಸ್ಥೆ ಮೊದಲಾದವುಗಳಲ್ಲಿ ಸೇರಬಯಸುತ್ತಾರೆ. ಯಾಕಂದರೆ ಇಂಥ ಸಂಘ, ಸಂಸ್ಥೆಗಳಿಂದ ಪರದೇಶಗಳಿಗೆ ಬೇಗನೆ ಹೋಗುವ ಅವಕಾಶವು ದೊರೆಯುವದು. ವರ್ಷಕ್ಕೆ ೧೦ ಸಾವಿರ ಪದವೀಧರರು ತಯಾರಾದರೂ ಸರಕಾರಿಯ ಕೆಲವು ಖಾತೆಗಳಲ್ಲಿ ಸಾಕಷ್ಟು ಪದವೀಧರರ ಅರ್ಜಿಗಳು ಬಾರದಿರುವದರಿಂದ, ಹೈಯರ್ ಸ್ಕೂಲುಗಳಲ್ಲಿ ತೇರ್ಗಡೆಯಾದವರಿಗೆ ಕೆಲಸಗಳು ಕೊಡಲ್ಪಡುವವು.

ಭಾರತದಲ್ಲಿ ಪದವೀಧರರಾಗಬೇಕಾದರೆ ೧೫ ವರುಷ ವಿದ್ಯಾರ್ಜನೆಯಾಗಬೇಕು. ಅದೇ ಜಪಾನಿನಲ್ಲಿ ಪ್ರಾಥಮಿಕ ೬, ಮಾಧ್ಯಮಿಕ ೫, ಹೈಯರ್ ಸ್ಕೂಲ್ ೩, ವಿಶ್ವವಿದ್ಯಾನಿಲಯ ೩ ಹೀಗೆ ೧೭ ವರುಷ ಬೇಕು. ಮಿಲಿಟರಿ ಶಿಕ್ಷಣವೂ ಎಲ್ಲ ಶಾಲೆ-ಕಾಲೇಜುಗಳಲ್ಲಿ ಒತ್ತಾಯವಾಗಿದೆ. ೨೧ ವರುಷದ ಜಪಾನಿಯ ತರುಣನು ೨ ವರುಷ ಮಿಲಿಟರಿ ಶಿಕ್ಷಣವನ್ನು ಕಲಿಯಲೇಬೇಕೆಂಬ ಕಟ್ಟಳೆಯಿದೆ. ೨೫ ನೆಯ ವರುಷಕ್ಕೆ

ಪದವೀಧರನಾದವನು ಕೆಲಸಕ್ಕೆ ಸೇರಿದ ಒಂದು ವರುಷದ ನಂತರ ಮಿಲಿಟರಿ ಕೆಲಸಕ್ಕೆ ಹೋಗಬೇಕಾಗುವದು. ವಿದ್ಯಾರ್ಥಿಗಳು ಶಾಲೆಗಳಲ್ಲಿ ೧೧ ವರುಷ ಕಲಿತ ಮಿಲಿಟರಿ ಶಿಕ್ಷಣದ ಫಲವಾಗಿ ಕೇವಲ ಸೈನ್ಯ ಶಿಕ್ಷಣಕ್ಕೆ ಸೇರಿದಾಗ ಹತ್ತು ತಿಂಗಳಲ್ಲಿಯೇ ತೇರ್ಗಡೆಯಾಗುವರು. ವಿಶ್ವವಿದ್ಯಾನಿಲಯಗಳಲ್ಲಿ ಅಭ್ಯಸಿಸಿದ ತರುಣರು ಎರಡು ವರುಷಗಳ ವರೆಗೆ ಸೈನ್ಯ ಶಿಕ್ಷಣದಲ್ಲಿ ಕೆಲಸಮಾಡಬೇಕು. ಪ್ರತಿಯೊಬ್ಬ ಜಪಾನಿಯನು ವಿದ್ಯಾವಂತನು; ಸೈನಿಕನಿರುವದರಿಂದ ಅಂತಃಕಲಹಗಳಿಗೆ (Civil wars) ಆಸ್ಪದವಿಲ್ಲ. ಒಮ್ಮೆ ದುರ್ದೈವದಿಂದ ಯುದ್ಧ ತಲೆದೋರಿದರೆ ಸಾರ್ವತ್ರಿಕ ಸೈನ್ಯ ಶಿಕ್ಷಣದ ಪರಿಣಾಮವಾಗಿ ಲಕ್ಷಾವಧಿ ಮಾನವರು ಸಹಜವಾಗಿ ಮರಣಕ್ಕೀಡಾಗಬಹುದು. ಮಾನವನ ಪ್ರಗತಿಗೆ ಯಾವ ತರದ ಶಿಕ್ಷಣವು ಎಷ್ಟು ವಿಧವಾಗಿ ದೊರೆಯಬೇಕೋ ಅಷ್ಟೇ ವಿಧದಿಂದ ಪ್ರತಿಯೊಬ್ಬ ಜಪಾನಿಯನಿಗೆ ಅದು ದೊರೆಯುತ್ತಿರುವದರಿಂದ ಇಂದಿಗೆ ಜಪಾನವು ಗಂಡುಗಲಿಗಳ ರಾಷ್ಟ್ರವಾಗಿದೆ.

೧೯೩೦ ರಿಂದ "ಮಾರ್ಕ್ಸನ ಸಮತಾವಾದವು" (communism) ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಲ್ಲಿ ಬೆಳೆಯತೊಡಗಿತು. ಅದರಿಂದ ತೊಂದರೆಯಾಗುವದನ್ನು ಕಂಡು ಸರಕಾರವು ೧೯೩೩ ರಲ್ಲಿ ಸಮತಾವಾದಿಗಳ ಸದ್ದಡಗಿಸಲು ದಬ್ಬಾಳಿಕೆಯನ್ನು ಆರಂಭಿಸಿತು. ಸಾವಿರಾರು ತರುಣರು, ಅಧ್ಯಾಪಕರು ಸೆರೆಮನೆಯ ಪಾಲಾದರು. ಅನೇಕರು ಕೆಲಸಗಳನ್ನು ಕಳೆದುಕೊಂಡರು. ಜಪಾನವು ೩ ವರುಷಗಳಿಂದ ಇಟಲಿ-ಜರ್ಮನಿಯೊಡನೆ ಸಮತಾವಾದಕ್ಕೆ ವಿರುದ್ಧವಾಗಿ ಮಾಡಿಕೊಂಡ ಒಪ್ಪಂದದ ಮೇರೆಗೆ ಇನ್ನು ಉಳಿದುಳಿದ ಸಮತಾವಾದಿಗಳನ್ನು ಸೆರೆಮನೆಗೆ ಕಳಿಸುತ್ತಲಿರುವರು. ಜಪಾನಿಯರಿಗೆ, ಸಮತಾವಾದಿಗಳನ್ನು ಬಿಟ್ಟರೆ ಬೇರಿನ್ನಾವ ಅಂತಃಶತ್ರುಗಳಿರುವದಿಲ್ಲ. ಇತ್ತೀಚೆಗೆ ಸಮತಾವಾದದ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಕೂಡದೆಂಬ ಕಟ್ಟಳೆಯಾಗಿದೆ. ಈ ಸಮತಾವಾದವನ್ನು ನಿರ್ಮೂಲಗೊಳಿಸಲು ನೂರಾರು ಹೊಸ ಪೋಲೀಸರು ನಿಯಮಿಸಲ್ಪಟ್ಟಿದ್ದಾರೆ.

ಜಪಾನಿನಲ್ಲಿರುವ ವಿಶ್ವವಿದ್ಯಾನಿಲಯಗಳ ಹಾಗು ವಿದ್ಯಾರ್ಥಿಗಳ ಸಂಖ್ಯೆಯನ್ನು ಕೆಳಗೆ ಕಾಣಿಸಿದೆ:—

| ವರುಷ | ವಿಶ್ವವಿದ್ಯಾನಿಲಯ | ವಿದ್ಯಾರ್ಥಿಗಳು |
|---|---|---|
| ೧೯೩೫ | ೪೫ | ೭೧೧೬೨ |
| ೧೯೩೪ | ೪೫ | ೭೦೮೯೩ |
| ೧೯೩೩ | ೪೬ | ೭೦೧೬೨ |
| ೧೯೩೨ | ೪೬ | ೬೯೯೮೫ |
| ೧೯೩೧ | ೪೬ | ೬೯೬೦೬ |

ಸದ್ಯಕ್ಕಿರುವ ೪೫ ವಿಶ್ವವಿದ್ಯಾನಿಲಯಗಳಲ್ಲಿ ೨೦ ಸರಕಾರದವು; ಉಳಿದುವು ಸಾರ್ವಜನಿಕರಿಂದ ಸ್ಥಾಪಿಸಿದುವು. ಟೋಕಿಯೋ ಪಟ್ಟಣವು ಜಪಾನಿನ ರಾಜಧಾನಿಯಲ್ಲದೆ ವಿದ್ಯೆಯ ಕೇಂದ್ರವೂ ಆಗಿದೆ. ಟೋಕಿಯೋ ನಗರದಲ್ಲಿಯೆ ಹೆಚ್ಚು ವಿಶ್ವವಿದ್ಯಾನಿಲಯಗಳಿರುವದರಿಂದ ಎಲ್ಲೆಲ್ಲಿ ನೋಡಿದರೂ ಕಪ್ಪು ಉಡುಪಿನ ತಂಡಗಳೇ ಕಣ್ಣಿಗೆ ಬೀಳುವವು. "ವಸೆಡಾ" (Waseda) ವಿಶ್ವವಿದ್ಯಾನಿಲಯವೊಂದರಲ್ಲಿಯೇ ೧೦ ಸಾವಿರ ವಿದ್ಯಾರ್ಥಿಗಳಿದ್ದಾರೆ. ಜಪಾನ ಸರಕಾರವು ವಿಶ್ವವಿದ್ಯಾನಿಲಯಗಳಿಗಾಗಿ ವರುಷಕ್ಕೆ ೫ತ್ತಿ ಕೋಟಿ ಎನ್ನುಗಳನ್ನು ವೆಚ್ಚಮಾಡುವದು. ಅಂದರೆ ಒಬ್ಬ ವಿದ್ಯಾರ್ಥಿಗೆ ೭೬೨ ಎನ್ನುಗಳು ವೆಚ್ಚವಾಗುವವು.

## ಜಪಾನಿನಲ್ಲಿ ಭಾರತೀಯ ವಿದ್ಯಾರ್ಥಿಗಳು

೭೦ ವರುಷಗಳ ಸತತ ಪ್ರಯತ್ನದಿಂದ ಇಂದಿಗೆ ಜಪಾನು ಸರ್ವಾಂಗ ಸುಂದರವಾದ ರಾಷ್ಟ್ರವಾಗಿದೆ. ಅದರಿಂದ ಪರದೇಶದವರು ಕೂಡ ಇಲ್ಲಿಗೆ ಬಂದು ಶಿಕ್ಷಣವನ್ನು ಪಡೆಯುತ್ತಲಿದ್ದಾರೆ. ಅವರಿಗಾಗಿ ಜಪಾನು ಸರಕಾರವು ಸಾಕಷ್ಟು ಅನುಕೂಲತೆಗಳನ್ನು ಒದಗಿಸಿ ಕೊಟ್ಟಿರುತ್ತದೆ. ಈ ತರಹದ ವ್ಯವಸ್ಥೆಗಾಗಿ ಸರಕಾರವು ವರುಷಕ್ಕೆ ೧೫ ಲಕ್ಷ ಎನ್ನುಗಳನ್ನು ವೆಚ್ಚಮಾಡುತ್ತದೆ. ಇಲ್ಲಿ ವಿದ್ಯಾಭ್ಯಾಸಕ್ಕಾಗಿ ಬಂದವ

ರಲ್ಲಿ ಚೈನಾದೇಶದ ವಿದ್ಯಾರ್ಥಿಗಳೇ ಮೊಟ್ಟಮೊದಲಿಗರು. ಚೀನಾ-ಜಪಾನಿ ಭಾಷೆಗಳಲ್ಲಿ ವಿಶೇಷ ಹೆಚ್ಚು ಕಡಿಮೆ ಇರುವದಿಲ್ಲ. ಆದರಿಂದ ಚೀನೀಯರಿಗೆ ಇಲ್ಲಿ ಬರಲು ಸುಲಭವಾಗಿದೆ. ಈಗಿನ ಚೀನಾದೇಶದ ಸರ್ವಾಧಿಕಾರಿಯಾದ ಜನರಲ್ ಚಂಗ್ಕೈಷೇಕ್‌ನು ಕೂಡ ಜಪಾನಿನಲ್ಲಿ ನಾಲ್ಕು ವರುಷವಿದ್ದು ವಿದ್ಯಾರ್ಜನೆ ಮಾಡಿದ್ದಾನೆ. ಇವರಿಬ್ಬರ ಯುದ್ಧದ ಮೊದಲು ಇಲ್ಲಿ ೩೦೦೦ ಚೀನಾ ವಿದ್ಯಾರ್ಥಿಗಳಿದ್ದರು. ಆದರೆ ಈಗ ೮೦೦ ಮಾತ್ರ ವಿದ್ಯಾರ್ಥಿಗಳುಳಿದಿರುವರು. ಸಯಾಮದಿಂದ ೧೫೦, ಬರ್ಮಾದಿಂದ ೧೦, ಜಾವಾ-ಮಲಯದಿಂದ ೫೦, ಫಿಲಿಪೈನ್‌ದಿಂದ ೮೦, ಅಫಗಾನಿಸ್ಥಾನದಿಂದ ೬, ಅಮೇರಿಕೆಯಿಂದ ೬೦, ಯುರೋಪ ಖಂಡದ ಬೇರೆ ಬೇರೆ ದೇಶಗಳಿಂದ ಕೂಡಿ ೪೦, ಹೀಗೆ ಒಟ್ಟು ೩೯೬ ವಿದ್ಯಾರ್ಥಿಗಳು ಜಪಾನಿನಲ್ಲಿ ವಿವಿಧ ವಿದ್ಯಾವ್ಯಾಸಂಗದಲ್ಲಿ ತೊಡಗಿದ್ದಾರೆ.

ಭಾರತೀಯ ವಿದ್ಯಾರ್ಥಿಗಳು ಕಳೆದ ೩೦ ವರುಷಗಳಿಂದ ಇಲ್ಲಿಗೆ ವಿದ್ಯಾಭ್ಯಾಸಕ್ಕೆ ಬರತೊಡಗಿದ್ದಾರೆ. ಮೈಸೂರು ಸರಕಾರದ ರೇಶಿಮೆ ಕಾರಖಾನೆಯ ಅಧಿಕಾರಿಗಳಲ್ಲಿ, ಮೂವರು ಜಪಾನಿನಲ್ಲಿ ಕಲಿತು ಬಂದವರಿರುವರು. ಇಲ್ಲಿಂದ ಸಣ್ಣಪುಟ್ಟ ಕೈಗಾರಿಕೆಗಳನ್ನು ಕಲಿತು ಬಂದ ನೂರಾರು ವಿದ್ಯಾರ್ಥಿಗಳು ಈಗ ಹಿಂದುಸ್ಥಾನದಲ್ಲಿರುವರು. ಈಗ ಜಪಾನಿನಲ್ಲಿ ೪೫ ಭಾರತೀಯರು ವಿವಿಧ ವಿದ್ಯಾಭ್ಯಾಸವನ್ನು ಮಾಡುತ್ತಲಿರುವರು. ಇವರೆಲ್ಲರೂ ಭಿನ್ನಪ್ರಾಂತದವರಾದರೂ ತಾವು ಭಾರತೀಯರು ಎಂಬ ಅಭಿಮಾನವುಳ್ಳವರಾಗಿ ಪರಸ್ಪರರು ಪ್ರೇಮದಿಂದಿರುವರು. ನಮ್ಮ ಕರ್ನಾಟಕದವರೂ ೪ ಜನರು ಇದ್ದಾರೆ. ಈ ಭಾರತೀಯ ವಿದ್ಯಾರ್ಥಿಗಳೆಲ್ಲರು ಕೂಡಿಕೊಂಡು "**ಭಾರತ ವಿದ್ಯಾರ್ಥಿಗಳ ಸಂಘ**" ವೊಂದನ್ನು ಸ್ಥಾಪಿಸಿದ್ದಾರೆ. ಈ ಸಂಘದ ಅಧ್ಯಕ್ಷರು ಕನ್ನಡಿಗರಾದ ಶ್ರೀ. ರಾಮಮೂರ್ತಿಯವರು. ಕಾರ್ಯದರ್ಶಿಗಳು ಶ್ರೀ. ಕರಾಚೂರ ಸಂಜಪ್ಪನವರು. ಇವರಿಬ್ಬರ ನೇತೃತ್ವದಲ್ಲಿ ಸಂಘದ ಕೆಲಸವು ಚನ್ನಾಗಿ ಸಾಗಿರುವುದು. ಜಪಾನ ಸರಕಾರವೂ ಕೂಡ ಭಾರತೀಯ ವಿದ್ಯಾರ್ಥಿಗಳ ನೈಪುಣ್ಯಕ್ಕೆ ಮೆಚ್ಚಿ ಕೆಲವರಿಗೆ " ವಿದ್ಯಾರ್ಥಿ ವೇತನ "(Scholorship

ವನ್ನು ಕೊಡುತ್ತಲಿರುವದು. ಅಂಥವರಲ್ಲಿ ಈ ಪುಸ್ತಕದ ಗ್ರಂಥ ಕರ್ತರೂ ಒಬ್ಬರು; ಎರಡು ವರುಷಗಳಿಂದ ವಿದ್ಯಾರ್ಥಿವೇತನವನ್ನು ದೊರಕಿಸುತ್ತಲಿರುವರು.

ಜಪಾನಿ ಭಾಷೆಯು ಅಷ್ಟು ಸುಲಭ ಭಾಷೆಯಲ್ಲ; ಹೆಚ್ಚಿಗೆ ಪರಿಶ್ರಮಮಾಡಬೇಕಾಗುವದು. ಅಲ್ಲಿ ವ್ಯವಹರಿಸಲು, ಮಾತನಾಡಲು ಈ ಭಾಷೆಯು ಬರಬೇಕಾದರೆ ಭಾರತೀಯ ವಿದ್ಯಾರ್ಥಿಗಳಿಗೆ ನಾಲ್ಕು ತಿಂಗಳು ಸಾಕು. ಇಂಗ್ಲೀಷ ಭಾಷೆಯ ಒತ್ತಾಯದ ಶಿಕ್ಷಣವನ್ನು ಜಪಾನೀಯರು ೧೧ ವರುಷ ಪಡೆಯುವದರಿಂದ ಚನ್ನಾಗಿ ಬರೆಯಬಲ್ಲರು; ಮಾತನಾಡಬಲ್ಲರು. ಭಾರತದಲ್ಲಿ ಹೊಟ್ಟೆಯ ಪಾಡಿಗಾಗಿ ಇಂಗ್ಲೀಷನ್ನು ಕಲಿತರೆ, ಜಪಾನಿನಲ್ಲಿ ಜ್ಞಾನಾರ್ಜನೆಗಾಗಿ ಕಲಿಸಲಾಗುವದು. ಇಂಗ್ಲಿಷರ ೧೫೦ ವರುಷಗಳ ಸಂಪರ್ಕದಿಂದ ನಾವು (ಭಾರತೀಯರು) ಅವರ ಭಾಷೆ, ರೀತಿ, ಮೊದಲಾದವುಗಳನ್ನು ಕಲಿತುಕೊಂಡರೆ ಜಪಾನಿಯರು ಇಂಗ್ಲಿಷರ ೭೦ ವರುಷಗಳ ಸಂಪರ್ಕದಿಂದ ಅವರ ಒಳ್ಳೆ ಗುಣಗಳನ್ನನುಸರಿಸಿ ಇಂದಿಗೆ ಅವರ ಸರಿಸಮಾನತೆಯನ್ನು ಪಡೆದು ಜಗತ್ತಿನಲ್ಲಿ ಕೀರ್ತಿವಂತರಾಗಿದ್ದಾರೆ. ಇಂದು ಭಾರತೀಯರು ಇಂಗ್ಲೀಷ ಭಾಷಾ ಔಪಾಸಕರಾಗಿದ್ದಾರೆ. ಅಂಥ ಔಪಾಸನೆಯನ್ನು ಬಿಟ್ಟು ಇಂಗ್ಲಿಷರ ಲೌಕಿಕ ಪ್ರಗತಿಯ ಮರ್ಮವನ್ನರಿತು ವರ್ತಿಸುವ ವರೆಗೆ ಭಾರತವು ದಾಸ್ಯತ್ವದಿಂದ ಎಂದೂ ಮುಕ್ತವಾಗಲಾರದು.

ಇಲ್ಲಿಯ ಔದ್ಯೋಗಿಕ ಶಾಲೆಗಳಲ್ಲಿ ಇಂಗ್ಲಿಷ ಭಾಷೆಯನ್ನುಪಯೋಗಿಸುವದರಿಂದ ಭಾರತೀಯ ವಿದ್ಯಾರ್ಥಿಗಳು ಉದ್ಯೋಗ ಕಲಿಯುವದಕ್ಕೆ ಬಂದರೆ ಪ್ರಯೋಜನವುಂಟು. ಅದು ಬಿಟ್ಟು ಬಿ. ಎ. ಎಂ. ಎ. ಗಳ ವಿದ್ಯಾಭ್ಯಾಸಕ್ಕೆ ಜಪಾನು ಸರಿಯಾದ ಸ್ಥಳವಲ್ಲ. ಜಪಾನಿನಲ್ಲಿ ಪ್ರತ್ಯಕ್ಷಜ್ಞಾನ ( Practical knowlege ) ದ ಅನುಭವವು ಹೆಚ್ಚಾಗಿ ದೊರೆಯುವದು. ಎಪ್ಪತ್ತೇ ವರುಷಗಳಲ್ಲಿ ಜಪಾನವು ಇಷ್ಟು ಮುಂದರಿಯಲು ಕಾರಣಗಳೇನಿರಬೇಕೆಂಬುದನ್ನು ತಿಳಿದುಕೊಳ್ಳಲು

ಇಲ್ಲಿಗೆ ಆವಶ್ಯವಾಗಿ ಬರಬೇಕು. ಅವುಗಳನ್ನು ಸಂಪೂರ್ಣವಾಗಿ ಅಭ್ಯಸಿಸಿ, ಭಾರತಕ್ಕೆ ಬಂದ ಮೇಲೆ, ಆ ರೀತಿಯಂತೆ ಕಾರ್ಯರಂಗದಲ್ಲಿಳಿದರೆ ಕಲ್ಯಾಣವು ಕಟ್ಟಿಟ್ಟದ್ದೆ. ಹಾಗೆ ದುಡಿಯುವ ಹದಿಹಾರಾಣೆಯು ದೇಶಭಕ್ತನೂ, ಸೇವಕನೂ ಮುಂದೆ ಬರಬೇಕಲ್ಲವೇ ?

## ೯. ಸಾಮಾಜಿಕ ವಿದ್ಯಾಭ್ಯಾಸ (Social education).

ಒತ್ತಾಯದ ೬ ವರುಷದ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ, ಕೆಲಸಗಳಲ್ಲಿ ತೊಡಗಿದ ತರುಣ–ತರುಣಿಯರ ಉನ್ನತಿಗಾಗಿ, ವಿದ್ಯಾಖಾತೆಯವರಿಂದ ರಾತ್ರಿಯ ಶಾಲೆಗಳು ತೆರೆಯಲ್ಪಟ್ಟಿವೆ. ಮೈ–ಮನ (Physically and Mentally) ಗಳಿಗೆ ಯೋಗ್ಯ ಶಿಕ್ಷಣವನ್ನು ಕೊಟ್ಟು, ಇಂಥವರಲ್ಲಿಯೂ ಕೂಡ ದೇಶಪ್ರೇಮವನ್ನುಂಟುಮಾಡುವ ಉದ್ದೇಶದಿಂದ ಈ ಶಾಲೆಗಳನ್ನು ಸ್ಥಾಪಿಸಿದ್ದಾರೆ. ಇಲ್ಲಿ ತರುಣರಿಗೆ ಅವರ ಒಲವನ್ನರಿತು ಕಲಿಸಲಾಗುವದು; ಒತ್ತಾಯದಿಂದಲ್ಲ. ೧೯೩೫ರ ಕೊನೆಗೆ, ಇಂಥ ಶಾಲೆಗಳು ೧೬೬೭೯ ಇದ್ದವು; ಅವುಗಳಲ್ಲಿ ೨೦೪೦೩೯ ತರುಣ-ತರುಣಿಯರು ಶಿಕ್ಷಣವನ್ನು ಪಡೆಯುತ್ತಲಿದ್ದರು. ಇಲ್ಲಿ ಕಲಿಯುವವರೇ ಈಗ ಅನೇಕ ಸಂಘಗಳನ್ನು ಸ್ಥಾಪಿಸಿಕೊಂಡು ಅವುಗಳ ಮುಖಾಂತರವಾಗಿ ಕಾರ್ಯವನ್ನು ಮಾಡುತ್ತಾರೆ. ೧೯೩೫ ರ ಕೊನೆಗೆ ಜಪಾನಿನಲ್ಲಿ ೧೫೪೬೯ ತರುಣರ ಸಂಘಗಳಿದ್ದುವು. ಅವುಗಳಲ್ಲಿ ೨೪೫೬೫೦೫ ಸದಸ್ಯರಿದ್ದಾರೆ. ೧೩೫೩೭ ತರುಣಿಯರ ಸಂಘಗಳಿದ್ದು ಅವುಗಳಲ್ಲಿ ೧೫೦೭೭೮ ಸದಸ್ಯರಿದ್ದಾರೆ.

ಸಮಾಜಸೇವೆ, ದೇಶಸೇವೆ, ಸಹಕಾರ ಮೊದಲಾದ ತತ್ವಗಳ ಮೇಲೆ, ಹುಡುಗ-ಹುಡಿಗಿಯರ ಸ್ಕೌಟು, ಗರ್ಲಗಾಯಿಡ್ಸು (Scouts and Girl-guides) ಗಳ ಸಂಘಗಳು ಜಪಾನಿನಲ್ಲಿ ಸಾವಿರಾರು ಇರುತ್ತವೆ. ಇಲ್ಲಿಯ ಬಾಲಚಮೂಹಗಳನ್ನು ಸ್ವೈಸ್ವದ ಪದ್ಧತಿಯಂತೆ ನಡೆಯಿಸುವದರಿಂದ ಪರದೇಶೀಯರಿಗೆ ಸೇರಲು ಆಸ್ಪದವಿಲ್ಲ. ೧೯೩೫ರ ಕೊನೆಯಲ್ಲಿ ಬಾಲಚಮೂಹ ಹಾಗು ಗರ್ಲ್ಗೈಯಿಡ್ಸುಗಳ ೧೫೩೪೩ ಸಂಘಗಳಿದ್ದು, ಅವುಗಳಲ್ಲಿ ೪೧೬೫೪೨೧ ಸದಸ್ಯರಿದ್ದರು.

ಜಪಾನಿನಲ್ಲಿರುವ ತರುಣ-ತರುಣಿಯರು ಯಾವುದಾದರೊಂದು ಸಂಘಕ್ಕೆ ಸದಸ್ಯರಾಗಿಯೇ ತೀರುತ್ತಾರೆ.

ಇಲ್ಲಿಯ ಶಾಲೆಗಳಲ್ಲಿ ಮತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕಲಿಸಕೂಡದೆಂಬ ಸರಕಾರದ ಕಟ್ಟಳೆಯಿದೆ; ಸಾರ್ವಜನಿಕ ಶಾಲೆಗಳಲ್ಲಿ ಕಲಿಸುತ್ತಾರೆಂದು ತಿಳಿದು ಬಂದರೆ, ಅಧಿಕಾರಿಗಳು ಕೂಡಲೇ ಅವುಗಳನ್ನು ಮುಚ್ಚಿಬಿಡುವರು. ನೈತಿಕ ಶಿಕ್ಷಣಕ್ಕಾಗಿ ಬೇಕಾದಷ್ಟು ಅವಕಾಶವಿದೆ; ಇಲ್ಲಿ ಮತಗಳ ಭಿನ್ನ ಭಿನ್ನ ಅಭಿಪ್ರಾಯಗಳ ಬೋಧನೆಯು ಸಾಧ್ಯವೇ ಇಲ್ಲ.

೧೯೩೫ರಲ್ಲಿ ಸರಕಾರ ಹಾಗೂ ಸಾರ್ವಜನಿಕರ ೫೦ ಕೋಟಿ ಎನ್ನುಗಳು ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡಲ್ಪಟ್ಟವು. ಈ ಹಣದಲ್ಲಿ ೩೦ ಕೋಟಿ ಎನ್ನುಗಳು ಪ್ರಾಥಮಿಕ ವಿದ್ಯಾಭ್ಯಾಸಕ್ಕೆ, ೧೦ ಕೋಟಿ ಎನ್ನುಗಳು ಮಾಧ್ಯಮಿಕ ಶಿಕ್ಷಣಕ್ಕಾಗಿ ವಿನಿಯೋಗವಾಗಿವೆ. ಪ್ರತಿಯೊಬ್ಬ ಜಪಾನಿಯನು ಕೇವಲ ವಿದ್ಯಾಭ್ಯಾಸದ ವೆಚ್ಚಕ್ಕೆಂದು ೬.೨೪ ಎನ್ನುಗಳ ಕಂದಾಯವನ್ನು ತೆರುತ್ತಲಿರುವನು.

## ಸ್ತ್ರೀ ವಿದ್ಯಾಭ್ಯಾಸ.

ಜಪಾನದಲ್ಲಿ ಗಂಡುಸರಷ್ಟೇ ಹೆಂಗುಸರು ವಿದ್ಯಾವತಿಯರಾಗಿದ್ದಾರೆ. ಜಗತ್ತಿನ ಸ್ತ್ರೀವಿದ್ಯಾಭ್ಯಾಸದ ಪ್ರಮಾಣದಿಂದ ನೋಡಿದರೆ, ಜಪಾನು ಅಗ್ರಸ್ಥಾನದಲ್ಲಿದೆಯೆಂದು ಹೆಸರಾಗಿದೆ. ಒತ್ತಾಯದ ಶಿಕ್ಷಣದಿಂದ ಹುಡುಗಿಯೂ ಸಹ ಆರು ವರುಷ ಕಲಿತೇ ಕಲಿಯುವಳು. ಇಲ್ಲಿ ವಿದ್ಯಾರ್ಜನೆಗೆ ಬಡತನ-ಸಿರಿತನಗಳು ಅಡ್ಡಿಯಾಗಲಾರವು. ದೃಢಕಾಯರಾದ ಹುಡುಗಿಯರಲ್ಲಿ ೧೦೦ಕ್ಕೆ ೯೯.೫೮-ರಂತೆ ಶಾಲೆಗೆ ಹೋಗುತ್ತಾರೆ.

ಜಪಾನಿ ಸ್ತ್ರೀಯರು ವಿದ್ಯಾವತಿಯರಾದುದರಿಂದ ಸಮಾಜದಲ್ಲಿ ಅವರಿಗೆ ಮಾನ್ಯಸ್ಥಾನವು ದೊರೆತಿದೆ. ೬೦ ವರುಷದ ಹಿಂದೆ ಇವರೂ ಕೂಡ ಭಾರತೀಯ ಸ್ತ್ರೀಯರಂತೆ ಸಮಾಜದ ದಾಸರಾಗಿ, ಮಾನ

ಮರ್ಯಾದೆಗಳಿಗೆ ಅಸ್ಪೃಶ್ಯರಾಗಿದ್ದರು. ಈಗ ಅವರು ಪ್ರತಿಯೊಂದು ಕೆಲಸದಲ್ಲಿ ಮುಂದುವರಿದಿದ್ದಾರೆ. ಸರಕಾರಿ ಖಾತೆಗಳಲ್ಲಿ, ಕಾರಖಾನೆಗಳಲ್ಲಿ, ಗಂಡುಸರಂತೆ ಸ್ತ್ರೀಯರೂ ಸೇರಿಕೊಂಡಿದ್ದಾರೆ. ಹೋಟಲು, ರೇಲ್ವೆ, ಬಸ್ಸು, ಟ್ರ್ಯಾಮ್, ಸಿನೆಮಾ, ನಾಟಕ, ಮೊದಲಾದವುಗಳು ಹೆಚ್ಚಾಗಿ, ಸ್ತ್ರೀಯರಿಂದಲೇ ನಡೆಯಿಸಲ್ಪಡುತ್ತಿವೆ. ಸಾಧಾರಣವಾಗಿ ಎಲ್ಲ ಕಚೇರಿಗಳ, ಸಾರ್ವಜನಿಕ ಸಂಸ್ಥೆಗಳ ತಿಜೋರಿಗಳು ಸ್ತ್ರೀಯರವೇ ಆಗಿವೆಯೆಂದರೂ ಸಲ್ಲುವದು.

ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ವಿದ್ಯಾರ್ಥಿಗಳಲ್ಲಿ ೧೦ಕ್ಕೆ ೮ರಂತೆ ಮಾಧ್ಯಮಿಕ ಶಾಲೆಗಳನ್ನು ಸೇರಿದರೆ, ವಿದ್ಯಾರ್ಥಿನಿಯರು ನೂರಕ್ಕೆ ೧೦ರಂತೆ ಸೇರುತ್ತಾರೆ. ಹುಡುಗಿಯರ ಮಾಧ್ಯಮಿಕ ವಿದ್ಯಾಭ್ಯಾಸದ ಕ್ರಮವು ೫ವರ್ಷವಿರುವದರಿಂದ ಅವುಗಳಿಗೆ "ಗರ್ಲ್ಸ ಹೈಸ್ಕೂಲ" ಗಳೆಂದು ಕರೆಯುತ್ತಾರೆ. ಗೃಹೋಪಯೋಗ ವಿಷಯಗಳ ಶಿಕ್ಷಣವೂ ಹೆಚ್ಚಾಗಿ ಕೊಡಲ್ಪಡುವದು. ನಿರ್ದಿಷ್ಟವಾದ ಉಡುಪು ಧರಿಸುವದರಿಂದ ವಿದ್ಯಾರ್ಥಿನಿಯರು ಸೊಗಸಾಗಿ ಕಾಣುವರು. ಇವರು ಕಲಿಯಬೇಕಾದ ವಿಷಯಗಳು ಕೆಳಗಿನಂತಿವೆ:—

Morals, Civics, the Japanese language, English, History, Geography, Methematics, Science, Drawing, and Domestic Scince Sewing, Music gymnastics, Pedagojas, Manual arts and other technical subjects.

ವಿದ್ಯಾರ್ಥಿನಿಯರಿಗಾಗಿಯೇ ವಿಶ್ವವಿದ್ಯಾನಿಲಯಗಳಿಲ್ಲ. ವಿದ್ಯಾರ್ಥಿಗಳ ವಿಶ್ವವಿದ್ಯಾನಿಲಯಗಳಲ್ಲಿ ಇವರಿಗೆ ಪ್ರವೇಶವಿಲ್ಲವೆಂಬ ಕಟ್ಟಳೆಯೇ ಇದೆ. ಪ್ರಾಥಮಿಕ ೬ ವರುಷ, ಹೈಸ್ಕೂಲು ೫ ವರುಷಗಳ ವಿದ್ಯಾಭ್ಯಾಸವು ಸ್ತ್ರೀಯರಿಗೆ ಸಾಕು. ಅದಕ್ಕೂ ಹೆಚ್ಚಿನ ವಿದ್ಯೆಯು ಇವರಿಗೆ ಪ್ರಯೋಜನವಾಗದೆಂದು ವಿಶ್ವವಿದ್ಯಾನಿಲಯದ ಶಿಕ್ಷಣವು ಕೊಡಲ್ಪಡು

ವದಿಲ್ಲ. ಇತ್ತೀಚೆಗೆ ಹೈಸ್ಕೂಲುಗಳಲ್ಲಿ ತೇರ್ಗಡೆಯಾದ ಸ್ತ್ರೀಯರಿಗಾಗಿ ಸರಕಾರವು ಕೆಲವು ಕಾಲೇಜುಗಳನ್ನು ಸ್ಥಾಪಿಸಿದೆ. ಇಲ್ಲಿ ಮೂರು ವರ್ಷ ಕಲಿಯಬೇಕು; ಕಲಿತರೂ ಯಾವ ಡಿಗ್ರಿಯೂ ದೊರೆಯುವದಿಲ್ಲ. ನೀತಿಯು ಕೆಡಬಾರದೆಂದೇ ಜಪಾನಿನಲ್ಲಿ ಸಹಶಿಕ್ಷಣವು ಕೊಡಲ್ಪಡುವದಿಲ್ಲ.

ಜಪಾನಿ ಸ್ತ್ರೀಯರ ಮೆಟ್ಟಲು ಪೌರ್ವಾತ್ಯದೇಶಗಳ ಸ್ತ್ರೀಯರ ಮೆಟ್ಟಲುಗಿಂತ ಎಲ್ಲ ರೀತಿಗಳಿಂದ ಸಾವಿರಪಾಲು ಮುಂದುವರಿದಿದೆ. ಆದರೂ ರಾಜಕೀಯ ಕ್ಷೇತ್ರದಲ್ಲಿ ಮಾತ್ರ ಪ್ರವೇಶವು ದೊರೆತಿಲ್ಲ. ಪೌರಸಭೆ, ಪ್ರಜಾಪ್ರತಿನಿಧಿಸಭೆ ಮೊದಲಾದವುಗಳ ಸದಸ್ಯರನ್ನು ಆರಿಸಲು ಸ್ತ್ರೀಯರಿಗೆ ಇನ್ನೂ ಮತಾಧಿಕಾರವಿಲ್ಲ. ಈ ಹಕ್ಕನ್ನು ಸಂಪಾದಿಸಲು ಕೆಲವು ಸ್ತ್ರೀಸಂಘಗಳು ಹಗಲಿರುಳೂ ದುಡಿಯುತ್ತಲಿವೆ. ಜಪಾನಿನಲ್ಲಿ ಸದ್ಯಕ್ಕೆ ಯುದ್ಧವು ಸಾಗಿರುವದರಿಂದ ಅವರ ಪ್ರಯತ್ನವು ಇನ್ನೂ ಫಲಿಸಿರುವದಿಲ್ಲ.

ಜಪಾನಿನಲ್ಲಿ ಬಾಲ್ಯವಿವಾಹದ ಪದ್ಧತಿಯೇ ಇಲ್ಲ. ತರುಣಿಯರ ಮದುವೆಯು ೨೩-೨೫ ವರುಷಗಳೊಳಗೆ ಆಗುತ್ತದೆ. ಪ್ರಾಥಮಿಕ ವಿದ್ಯಾಭ್ಯಾಸ ಮುಗಿದ ಮೇಲೆ ಬಡವರಾದ ತರುಣಿಯರು ಕಾರಖಾನೆಗಳಲ್ಲಿ ಸೇರಿಕೊಂಡು ಸಾಕಷ್ಟು ಹಣವನ್ನು ಗಳಿಸಿ ಮದುವೆಯಾಗುತ್ತಾರೆ. ಶ್ರೀಮಂತರಿದ್ದವರು ಸಂಪೂರ್ಣ ವಿದ್ಯಾಭ್ಯಾಸ ಮುಗಿಸಿದ ಮೇಲೆ ಒಂದೆರಡು ವರುಷ ಗೃಹಕೃತ್ಯದ ಹೆಚ್ಚಿನ ವಿಷಯಗಳನ್ನರಿತು ಮದುವೆಯನ್ನು ಮಾಡಿಕೊಳ್ಳುತ್ತಾರೆ. ತಂದೆ-ತಾಯಿಗಳ ಒಪ್ಪಿಗೆಯಿಲ್ಲದೆ ಮದುವೆಗಳಾಗುವದಿಲ್ಲ. ಹಣದಾಸೆಗಾಗಿ ಮುದಿಗೂಗೆಗಳಿಗೆ ಹೆಣ್ಣು ಮಕ್ಕಳನ್ನು ಧಾರೆಯೆರೆದುಕೊಡುವ ಕಟುಕ ತಂದೆ-ತಾಯಿಗಳು ಜಪಾನಿನಲ್ಲಿಲ್ಲವೆನಬಹುದು. ಮುದುಕರ ಮದುವೆಯ ಆಸೆಗಳು ಇಲ್ಲಿ ಫಲಿಸಲು ಆಸ್ಪದವೇ ಇಲ್ಲ.

ಗಂಡ ಸತ್ತವಳ ತಲೆಬೋಳಿಸಿ, ಮಡಿಹೆಂಗುಸನ್ನಾಗಿ ಮಾಡುವ ಕ್ರೂರಪದ್ಧತಿಯು ಜಪಾನಿನಲ್ಲಿ ಇಲ್ಲನೇ ಇಲ್ಲ. ಪುನರ್ವಿವಾಹಗಳು

ಆಕ್ಷೇಪಣೆಗಳಿಲ್ಲದೆ ಸಲೀಸಾಗಿ ನಡೆಯುವವು. ವಿಧವೆಯ ಮುಖ ದರುಶನವು ಅಮಂಗಳವೆಂದು ತಿಳಿಯುವ ಮೂಢನಂಬಿಕೆಗೆ ಜಪಾನಿನಲ್ಲಿ ಆಸ್ಪದವಿಲ್ಲ. ಗಂಡ ತೀರಿದ ಹೆಣ್ಣುಮಕ್ಕಳ ತಲೆಬೋಳಿಸುವದು, ಊಟ, ಉಡುವು ಬದಲಾಯಿಸುವುದು ಮೊದಲಾದ ಅನೇಕ ಅಪಮಾನಕರವಾದ ಪದ್ಧತಿಗಳುಳ್ಳ ನಾಗರಿಕತೆಯು ಅದೆಂಥದೋ ದೇವರೇ ಬಲ್ಲ! ಇವರನ್ನು ಅವಮಾನಪಡಿಸುವ ಸಮಾಜಕ್ಕೆ ಧಿಕ್ಕಾರವಿರಲಿ!

ಇಲ್ಲಿಯ ಸ್ತ್ರೀಯರೂ ಭಾರತೀಯ ಸ್ತ್ರೀಯರಂತೆ ನಡುಬೈತಲೆ ಯನ್ನು ತೆಗೆಯುತ್ತಾರೆ. ಹಣೆಗೆ ಕುಂಕುಮವಿಲ್ಲ. ಕೈಗೆ ಬಳೆಗಳಿಲ್ಲ. "ಕಿಮೊನೊ" ಎಂಬ ಜಪಾನಿಯ ಸೀರೆಯನ್ನುಟ್ಟುಕೊಳ್ಳುವದರಿಂದ ಮುತ್ತೈದೆಯರು ಯಾರು, ವಿಧವೆಯರು ಯಾರು ಎಂಬ ಭೇದವು ತಿಳಿಯುವದೇ ಇಲ್ಲ. ವಿಧವೆಯಾದ ಮಾತ್ರಕ್ಕೆ ವಿಕಾರವಾಗುವ ವಿಧಾನ ಗಳು ಇಲ್ಲಿಲ್ಲ. ಮತ್ತೆ ಮದುವೆಯಾಗಲು ಸಮಾಜವು ತೊಂದರೆಪಡಿಸುವ ದಿಲ್ಲ. ಸಂಸಾರವು ಸುಸೂತ್ರವಾಗಿ ಸಾಗದ ಗಂಡನನ್ನು ಬಿಟ್ಟು, ಬೇರೊಬ್ಬನನ್ನು ಮದುವೆಯಾಗುವ ಅಧಿಕಾರವು ಇಲ್ಲಿಯ ಸ್ತ್ರೀಯರಿಗೆ ಇರುತ್ತದೆ.

ಇಲ್ಲಿಯ ಸ್ತ್ರೀಯರಿಗೆ ವಸ್ತ್ರ-ಒಡವೆಗಳ ಹುಚ್ಚು ಇರುವದಿಲ್ಲ. ಬಡವರೂ, ಸಿರಿವಂತರೂ "ಕಿಮೊನೊ" (ಸೀರೆ) ಹೊರತಾಗಿ ಆಭರಣ ಗಳನ್ನು ಧರಿಸುವದೇ ಇಲ್ಲ. ಕೇವಲ ಆಭರಣಗಳಿಗಾಗಿ ಮದುವೆ ನಡೆಯುವದಿಲ್ಲ. ವಧುವು ಶ್ರೀಮಂತರ ಮಗಳಾಗಿದ್ದರೆ, ವರದಕ್ಷಿಣೆಯ ಬದಲಾಗಿ ಒಂದು ಕಾರಖಾನೆ ಇಲ್ಲವೆ ಒಂದು ಭವ್ಯ ಕಟ್ಟಡವು ವರನಿಗೆ ದೊರೆಯುವದು. ಇಲ್ಲಿಯ ಸ್ತ್ರೀಯರು ಕೇವಲ ಆಭರಣಗಳಿಗಾಗಿ ಗಂಡಂದಿರನ್ನು ಪ್ರೀತಿಸಿ, ಅವು ದೊರೆಯದಿದ್ದರೆ ಮಾನಹಾನಿಯಾಗು ವಂಥ ಹೇಸಿಗೆಲಸಗಳನ್ನು ಮಾಡುವದಿಲ್ಲ. ಇವರು ವಿನಯಸಂಪನ್ನರು, ಪತಿವ್ರತೆಯರು, ಪತಿಗಾಗಿ ಪ್ರಾಣಾರ್ಪಣಮಾಡಲು ಸಿದ್ಧರಾದ ಪಾಲುಗಾರರು. ಜಪಾನಿನ ಸ್ತ್ರೀಯರು ಸುಂದರಿಯರು, ಅತ್ತೆಮಾವಂ ದಿರಿಗೆ ವಿಧೇಯರಾಗಿ, ಗಂಡನ ಆಜ್ಞಾನುಧಾರಿಗಳಾಗಿ ವರ್ತಿಸುವವರು.

ಗಂಡನ ಒಡಹುಟ್ಟಿದವರಲ್ಲಿ ಕಲಹಬೀಜವನ್ನು ಬಿತ್ತಿ, ನಾಲ್ಕು ಒಲೆಗಳನ್ನು ಹೂಡಿಸುವ ಉಸಾಬರಿಯನ್ನು ಮಾಡಲರಿಯರು. ಇವರೂ ಪೌರ್ವಾತ್ಯ ಸ್ತ್ರೀಯರಂತೆ ಮಕ್ಕಳನ್ನು ಹೆರುವದರಲ್ಲಿ ಹೆಸರಾದವರು. ಇವರು ಒಬ್ಬೊಂಟಿಗರಾಗಿ ನಿರ್ಭಯದಿಂದ ಎಲ್ಲಿ ಬೇಕಾದಲ್ಲಿಗೆ ಹೋಗಬಲ್ಲರು ಹೆಂಗಸರನ್ನು ಅಪಹರಿಸಿ, ಜಾತಿಯನ್ನು ಕೆಡಿಸಿ, ಮತಪ್ರಚಾರವನ್ನು ಮಾಡುವ ದುಷ್ಟಪ್ರವೃತ್ತಿಯು ಜಪಾನಿನಲ್ಲಿ ಸುಳಿದಿರುವದಿಲ್ಲ. ಹೆಂಗುಸರ ಮುಖ ದರುಶನ ಮಾತ್ರದಿಂದ ದಿಕ್ಕೆಡುವ ಗಂಡಸರ ಭ್ರಮವು ಮಾಯವಾಗಿದೆ. ಸ್ತ್ರೀಪುರುಷರಿಬ್ಬರೂ ಯಾವಾಗಲೂ ಕಲೆಯುವದರಿಂದ ಆ ಭಾವವು ಹೇಳಹೆಸರಿಲ್ಲದಂತಾಗಿದೆ.

ಸ್ತ್ರೀಯರಲ್ಲಿ ಒಗ್ಗಟ್ಟನ್ನುಂಟು ಮಾಡುವುದಕ್ಕೆ, ಸ್ತ್ರೀಯರ ಹಕ್ಕುಗಳನ್ನು ಕಾಪಾಡುವದಕ್ಕೆ ಇಲ್ಲಿ ನೂರಾರು ಸ್ತ್ರೀಸಂಘಗಳು ದುಡಿಯುತ್ತಲಿವೆ. ಇವುಗಳಲ್ಲಿ "Aikoku fijin kai" ದೇಶಸೇವಿಕೆಯರ ಸಂಘವೆ ಬಲು ದೊಡ್ಡದು. ಇದಕ್ಕೆ ೨೭ ಲಕ್ಷ ಸದಸ್ಯರಿದ್ದಾರೆ. ೧೯೦೧ರಿಂದ ಜರುಗಿದ ಯುದ್ಧಗಳಲ್ಲಿ ಮಡಿದ ಸೈನಿಕರ ಸಂಸಾರಗಳಿಗೆ ಸಹಾಯ ಮಾಡುವದೇ ಈ ಸಂಘದ ಮುಖ್ಯ ಗುರಿಯಾಗಿದೆ. ಇದಲ್ಲದೆ 'ರೆಡ್‌ಕ್ರಾಸ್' ಎಂಬ ದೇಶಸೇವಿಕೆಯರ ಮತ್ತೊಂದು ಸಂಘವಿದೆ. ಅದಕ್ಕೆ ೨೨ ಲಕ್ಷ ಸದಸ್ಯರಿರುವರು.

ಈಗಂತೂ, ಚೀನಾ-ಜಪಾನಿನ ಯುದ್ಧವು ನಡೆದಂದಿನಿಂದ ಇಲ್ಲಿಯ ಸ್ತ್ರೀಯರು ಬಹುವಿಧವಾಗಿ ದೇಶಕ್ಕೆ ನೆರವಾಗುತ್ತಿದ್ದಾರೆ. ಸೈನಿಕರಾಗಿ ಯುದ್ಧಕ್ಕೆ ತೆರಳಿದವರ ಮನೆಯವರಿಗೆಲ್ಲ ಸಹಾಯ ನೀಡುತ್ತಿದ್ದಾರೆ. ಪಟ್ಟಣಗಳ ಬೀದಿಗಳಲ್ಲಿ ಬೀಸಾಡಿದ ಕಾಗದ, ತಗಡು, ಕಬ್ಬಿಣ ಮೊದಲಾದ ಪದಾರ್ಥಗಳನ್ನು ಕಲೆಹಾಕಿ, ಮಾರಿ, ಬಂದ ಹಣವನ್ನು ಯುದ್ಧಕ್ಕಾಗಿ ವಿಮಾನಗಳನ್ನು ಕೊಂಡುಕೊಳ್ಳಲು ಸೈನಿಕರಿಗಿತ್ತು ನೆರವಾಗುತ್ತಿದ್ದಾರೆ. ಆರ್ಥಿಕದ ಮುಗ್ಗಟ್ಟಿನ ಕಾಲದಲ್ಲಿ ಉಡುಪು ತೊಡುಪುಗಳಿಗೆ ಹಣವನ್ನು ವ್ಯರ್ಥವಾಗಿ ಹಾಳುಮಾಡಬಾರದೆಂದು

ಬೋಧಿಸುತ್ತಿದ್ದಾರೆ. ಮದುವೆಗಳಿಗೆ ನಿರರ್ಥಕವಾಗಿ ಹಣವನ್ನು ವೆಚ್ಚ ಮಾಡಬಾರದೆಂದು ಉಪದೇಶಿಸುತ್ತಾರೆ. ಇಲ್ಲಿಯ ಸ್ತ್ರೀಯರು ಹೀಗೆ ಒಂದಿಲ್ಲೊಂದು ರೀತಿಗಳಿಂದ ದೇಶೋನ್ನತಿಗಾಗಿಯೂ, ಸಮಾಜೋದ್ಧಾರಕ್ಕಾಗಿಯೂ ಸ್ವಾರ್ಥದ ಪರಿವೆಯನ್ನು ಬಿಟ್ಟು ಒಂದೇ ಸಮನೆ ದೇಶಸೇವೆಗಾಗಿ ಬದ್ಧಕಂಕಣರಾಗಿ ದೇಹವನ್ನು ಸವಿಸುತ್ತಿರುವರು.

## ಜಪಾನಿನ ಆಟಗಳು (Sports)

ಜಪಾನಿನ ಆಟಗಳು ವಿನೋದಕ್ಕಾಗಿರದೆ, ದೇಹಸಂವರ್ಧನೆಗಾಗಿ, ದೇಶಸಂರಕ್ಷಣೆಗಾಗಿ ಅಭ್ಯಸಿಸಲ್ಪಡುತ್ತಿವೆ. ಪಾಶ್ಚಿಮಾತ್ಯರ ಆಟಗಳ ಪರಿಣಾಮದಿಂದ ಇಂದಿನ ಪೀಳಿಗೆಯು ಹೆಚ್ಚು ಗಟ್ಟಿಮುಟ್ಟಿಯಾಗಿದೆ. ದೇಹಸಂಪತ್ತಿನ ವಿಚಾರವಾಗಿ ಯಾರಾದರು ಪಾಶ್ಚಿಮಾತ್ಯರನ್ನು ಪ್ರಶ್ನಿಸಿದರೆ, ತಮ್ಮ ಪೂರ್ವಜರಿಗಿಂತಲೂ ಗಟ್ಟಿಗರಾಗಿದ್ದೇವೆಂದು ಉತ್ತರ ಕೊಡುವರು. ಅದೇ ನಮ್ಮ ಭಾರತೀಯರನ್ನು ಕೇಳಿದರೆ, ನಿಷೇಧಾರ್ಥದಿಂದ ಉತ್ತರ ಬರುವದರಲ್ಲಿ ಸಂಶಯವಿಲ್ಲ. ಜಪಾನಿಯರು ಪಾಶ್ಚಿಮಾತ್ಯರ ಆಟಗಳಲ್ಲಿ ನಿಪುಣರಾಗಿ ಅವರಿಗೆ ಗುರುಪ್ರಾಯರಾಗಿದ್ದಾರೆ. ಸರಕಾರದ ಪ್ರೋತ್ಸಾಹಸವು ದೊರೆತದ್ದರಿಂದ ಬೆಳವಣಿಗೆಯಾಗಲು ಕಾರಣವಾಯಿತಲ್ಲದೆ ಬೇರೆ ಕಾರಣಗಳಿಲ್ಲ.

ಜಪಾನಿನ ಆಟಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು:—
(೧) ಪರಂಪರಾಗತವಾದ ಆಟಗಳು, ಈಸುವುದು, ಕುಸ್ತಿ (Sums), ಆತ್ಮರಕ್ಷಣೆಯ ವಿದ್ಯೆ (Judo), ಕತ್ತಿ, ದೊಣ್ಣೆವರಸೆ ಮೊದಲಾದವುಗಳು.
(೨) ನಲವತ್ತು ವರುಷಗಳಿಂದೀಚೆಗಿನ ಬೇಸ್‌ಬಾಲ್, ಟೆನಿಸ್, ಫುಟ್‌ಬಾಲ್, ವ್ಹಾಲಿಬಾಲ್, ಟ್ರೇಕ್ ಆ್ಯಂಡ್ ಫೀಲ್ಡ (Treak & field) ಮೊದಲಾದವುಗಳು.

### ಈಸುವುದು

ಇದು ಜಪಾನಿಯರ ಹುಟ್ಟುಗುಣವಾಗಿದೆ; ಅದರಿಂದ ನಿಪುಣತೆಯನ್ನು ಪಡೆಯಲು ಬಲು ಅನುಕೂಲವಾಗಿದೆ. ಮೇಲಾಗಿ ಸುತ್ತಲೂ



ಗೊಂಬೆಯಾಟ (Puppet show) ವು ಜಪಾನಿನಲ್ಲಿ ಉಚ್ಚ ಕಲೆಯನ್ನು
ಮುಟ್ಟಿರುವುದು. ೧೮೬೮ರ ವರೆಗೆ ಗೊಂಬೆಯಾಟವು
ಬಹಳ ಪ್ರಸಿದ್ಧಿಯನ್ನು ಪಡೆದಿದ್ದಿತು.



ಗೊಂಬೆಯಾಟವು.

ನೀರಿನಿಂದ ಬಳಸಿಕೊಂಡಿರುವ ನಡುಗಡ್ಡೆಯಾಗಿರುವದರಿಂದ ಈಸುವುದು ನೈಜವಾಗಿ ಇವರಿಗೆ ಬರುತ್ತಿದೆ. ಕಳೆದ ಎರಡು ಅಂತರ್‌ರಾಷ್ಟ್ರೀಯ ಆಟಗಳ ಸ್ಪರ್ಧೆಯಲ್ಲಿ (Olympics) ಇವರು ಈಸುವುದರಲ್ಲಿ ಪ್ರಥಮ ಶ್ರೇಣಿಯನ್ನು ಪಡೆದಿರುವದು ಆಶ್ಚರ್ಯದ ಮಾತಲ್ಲ.

೧೯೧೦ರಲ್ಲಿ ಪರದೇಶದ ಈಸುವ ಪದ್ಧತಿ, ಆಟಗಳು ಇಲ್ಲಿ ಕಾಲಿಟ್ಟವು. ಇವರು ಅವುಗಳನ್ನು ಚನ್ನಾಗಿ ಅನುಕರಿಸಿ ಜಗತ್ತಿನಲ್ಲಿಯೇ ಹೆಸರುಪಡೆದರು. ೧೯೩೨ರಲ್ಲಾದ ೧೦ನೆಯ ಆಲಿಂಪಿಕ್‌ನ ಈ ಆಟದಲ್ಲಿ ಇವರು ಅದ್ಭುತವಾದ ಪ್ರಗತಿಯನ್ನು ತೋರಿಸಿದರು. ೧೯೩೬ರಲ್ಲಿ ಬರ್ಲಿನ್‌ದಲ್ಲಾದ ಅಂತರ್‌ರಾಷ್ಟ್ರೀಯ ಸ್ಪರ್ಧೆಯ ೧೨ ತರಹದ ಆಟಗಳಲ್ಲಿ ಜಪಾನಿಯರು ೭ ವಿಧಗಳಲ್ಲಿ ಜಯಶೀಲರಾಗಿ ಹೆಚ್ಚಿನ ಪಾರಿತೋಷಕವನ್ನು ಪಡೆದರು. ಈಜುವ ಆಟಗಳಲ್ಲಿ ಜಪಾನಿಯರು ೩೨ ಗುಣಗಳನ್ನು (ಪಾಯಿಂಟ್), ಅಮೇರಿಕೆಯವರು ೨೭ ಗುಣಗಳನ್ನು ಪಡೆದರು.

## ಈ ಆಟಗಳಲ್ಲಿ ಗೆದ್ದವರ ಹೆಸರುಗಳು

200—Metre breast stroke: Reiso Koike (Japan) 2:42.6 minutes (New Japanese record).

200—Metre free style: Masanori Yusa (Japan) 2:13.2.

1500—Metre free style: Sunao Ishikawa (Japan) 19:12.0.

300—Metre Medlay race: American team (Drysdala, Kasby and Fik) 3:20.2.

100—Metre back stroke: Taylor Drysala (U.S.) 1:10.2.

100—Metre treak stroke: Reiso Koike (Japan) 1:36.6 (New Japan record).

400—Metre free style: Tack medica (U. S.) 4:45.2.
400—Metre relay: American team(Chrostowsk, Lindsay, Wolf and Gick) 3:53.8.
800—Metre free style: Hirostic Nagami(Japan) 10:02.4.
100—Metre free style: Petor trick (U.S.) 57:2.
200—Back stroke: Kicehi Yeshida (Japan) 2:35.6 (New Japan record).
800—Metre relay: Japan team (Yusa, Iohi harida, Makind and Nagami) 8:52.2 (New world record).

ಜಪಾನಿಯರು ಈಸುವುದರಲ್ಲಿ ಇಷ್ಟು ಕೀರ್ತಿಯುತರಾಗಿದ್ದಾರೆ. ಇದರ ಮೇಲಿಂದ ನೋಡಲು ಎಷ್ಟು ಪ್ರಗತಿಯನ್ನು ಪಡೆದಿದ್ದಾರೆಂಬುವದು ಒಡೆದು ಕಾಣುವಂತಿದೆ.

## ಕುಸ್ತಿ (Sumo=ಮಲ್ಲವಿದ್ಯೆ)

ಜಪಾನಿನಲ್ಲಿ ಈ ಮಲ್ಲವಿದ್ಯೆಗೆ "Sumo" ಎಂದು ಪ್ರಸಿದ್ಧಿಯಿದೆ. ಪಾಳೆಯಗಾರರ ಆಳಿಕೆಯಲ್ಲಿ ಪ್ರತಿಯೊಬ್ಬ ಪಾಳೆಯಗಾರನೂ ಜಟ್ಟಿಗಳಿಗೆ ಆಶ್ರಯವನ್ನು ಕೊಟ್ಟು, ತನ್ನ ಕೀರ್ತಿಯನ್ನು ಮಾಡಿಕೊಳ್ಳುತ್ತಿದ್ದನು. ೩೦೦ ವರುಷಗಳ ಹಿಂದೆ, ಮಲ್ಲರ ಪ್ರದರ್ಶನವು ಪ್ರತಿ ಜನವರಿ ತಿಂಗಳಿನಲ್ಲಿ ನೆರೆಯುತ್ತಿದ್ದಿತು. ಇಂದಿಗೂ ಹಾಗೆಯೆ ನಡೆಯುತ್ತ ಬಂದಿದೆ.

ಜಪಾನಿಯರ ಕುಸ್ತಿಯಾಡುವ ರೀತಿಗಳು ಭಾರತೀಯರಂತಿರುವದಿಲ್ಲ. ಕುಸ್ತಿಯ ಕಣವು ಐದು ಗಜ ಸುತ್ತಳತೆಯದು. ಅಲ್ಲಿ ಇಬ್ಬರು ಜಟ್ಟಿಗಳು ಕಾದಾಡುವರು. ಮೊಳಕಾಲಿನಿಂದ ಮೇಲ್ಪಟ್ಟ ಯಾವನ



ಪ್ರಾಥಮಿಕ ಶಾಲೆಯಲ್ಲಿ ಹುಡುಗರು ಕುಸ್ತಿಯ ವಿದ್ಯೆಯನ್ನು
ಅಭ್ಯಸಿಸುತ್ತಿರುವುದು.



ಕುಸ್ತಿಯಾಡುವ ಮೊದಲು ಪೈಲವಾನರು ಅಕಾಡಕ್ಕೆ ಬಂದು ಪ್ರೇಕ್ಷಕರನ್ನು ವಂದಿಸಿ
ಪ್ರಾರಂಭಮಾಡುವುದು. ಕುಸ್ತಿಯು ಕಡಾಕಡಿಯಾಗಿ ನಡೆಯುತ್ತಿದ್ದರೂ
ಐವತ್ತು ಸಾವಿರ ಪ್ರೇಕ್ಷಕರು ಶಬ್ದವಿಲ್ಲದೆ ಕುಸ್ತಿಯನ್ನು
ನೋಡುವರೇ ವಿನಃ ಪುಟ್ಟ ಕಾಳಗಕ್ಕೆ
[illegible]

ದೇಹಾಂಗವು ಭೂಮಿಗೆ ತಗುಲುವುದೋ ಅವನು ಸೋತನೆಂದು ತಿಳಿಯು ಲಾಗುವುದು. ಹೀಗೆ ಜಯಾಪಜಯವು ನಿರ್ಣಯವಾಗುವದರಿಂದ ಮಲ್ಲ ಯುದ್ಧವು ಒಂದೆರಡೇ ನಿಮಿಷಗಳಲ್ಲಿ ಮುಗಿದುಬಿಡುವುದು. ಕೈಗೆ ಕೈಗೆ ಹತ್ತಿದೊಡನೆ ಶತ್ರುವನ್ನು ನೆಲಕ್ಕುರುಳಿಸುವದಕ್ಕೆ, ಕಣದ ಮೇರೆಯ ಗೆರೆಯನ್ನು ದಾಟಿಸುವದಕ್ಕೆ ಮಲ್ಲರಿಬ್ಬರೂ ಯತ್ನಿಸುವರು. ಶಕ್ತಿವಂತ ನಾದ ಮಲ್ಲನೂ ಸಹ, ಅಕಸ್ಮಾತ್ ಕಾಲುಜಾರಿ, ಕೈಯೂರಿದರೆ ಸೋತ ನೆಂದೇ ತಿಳಿಯಲಾಗುವುದು. ಆದುದರಿಂದ ನಡದಲ್ಲಿ ಶಕ್ತಿಯಿದ್ದವನೇ ಗೆಲ್ಲಬಲ್ಲನು. ಈ ಕುಸ್ತಿಯ ರೀತಿಯಲ್ಲಿ ೪೮ ಹಿಡಿತಗಳಿವೆ. ಪ್ರತಿಯೊಂದು ಶಾಲೆಯಲ್ಲಿಯೂ ಇದರ ಶಿಕ್ಷಣವನ್ನು ಕೊಡುವ ಏರ್ಪಾಡಾಗಿದೆ.

ಈಗ ಇಲ್ಲಿ, ಕುಸ್ತಿಯ ಪಂದ್ಯಾಟಗಳು ವರುಷದಲ್ಲಿ ಎರಡು ಸಲ ಆಗುವವು; ಹನ್ನೊಂದು ದಿನಗಳ ವರೆಗೆ ಸಾಗುವವು. ಪ್ರತಿ ದಿನವೂ ಮುಂಜಾವು ೯ ಗಂಟೆಯಿಂದ ಸಂಜೆಯ ೬ ಗಂಟೆಯ ವರೆಗೆ ಕುಸ್ತಿಗಳು ನಡೆಯುವವು. ಸುಮಾರಾಗಿ ೩೦೦ ಜಟ್ಟಿಗಳು ನೆರೆಯುವರು. ಈ ನೆರೆದ ಜಟ್ಟಿಗಳಲ್ಲಿ ಅವರವರ ಮೈಕಟ್ಟು, ನಿಲುವು ಮೊದಲಾದವುಗಳಿಂದ ನಾಲ್ಕು ತರಗತಿಗಳನ್ನಾಗಿ ವಿಂಗಡಿಸಲಾಗುವುದು. ಪ್ರತಿದಿನವೂ, ಪ್ರತಿಯೊಬ್ಬನೂ ಕುಸ್ತಿ ಹಿಡಿಯಲೇಬೇಕು. ೧೧ ದಿನಗಳಲ್ಲಿ ೧೧ ಸಲವೂ ಯಾವನು ಗೆಲ್ಲುವನೋ ಅಂಥವನೆ ಯಾವ ತರದ ಪಂದ್ಯ ಕಟ್ಟಿರುವನೋ ಅದರ ವೀರನೆಂದು ಸಾರಲಾಗುವುದು. ೯ರಿಂದ ೨ ಗಂಟೆಯ ವರೆಗೆ ಹೊಸಬರು ಹಾಗೂ ಕೀಳು ತರಗತಿಯ ಕುಸ್ತಿಗಳು, ೨ರಿಂದ ೪.೮ ವರೆಗೆ ಮಧ್ಯಮ ತರಗತಿಯ ಕುಸ್ತಿಗಳು, ೫ರಿಂದ ೬ ಗಂಟೆಯ ವರೆಗೆ ಉತ್ತಮ ತರಗತಿಯ ಕುಸ್ತಿಗಳಾಗುವವು. ಈ ಶ್ರೇಷ್ಠ ತರಗತಿಯ ಕುಸ್ತಿಗಳನ್ನು ನೋಡಲು ಜನ ಕಿಕ್ಕಿರಿಯುವರು. ಆ ನೋಟವು ಜನರ ಎದೆಯನ್ನು ಕುಲುಕಿಸಿ ಬಿಡುವುದು. ೧೧ ದಿನಗಳಲ್ಲಿ, ಶ್ರೇಷ್ಠ ತರಗತಿಯ ಜಟ್ಟಿಗಳಲ್ಲಿ ಯಾವನು ತಪ್ಪದೆ ಗೆಲ್ಲುವನೋ ಅವನೇ 'ಮಹಾವೀರನು' Grand Champion ಎಂದು ಸಾರಲಾಗುವುದು.

ಕುಸ್ತಿಗಳನ್ನು ನೋಡಲು ೫, ೩, ೨, ೧ ರೂಪಾಯಿಗಳ ದರದ

ತಿಕೀಟುಗಳಿರುತ್ತವೆ. ಟೋಕಿಯೋ ಪಟ್ಟಣದಲ್ಲಿ "ರ್‍ಯೋಗೋಕು" ಎಂಬ ಭವ್ಯವಾದ ಸ್ಥಳವಿದೆ. ೨೫ ಸಾವಿರ ಜನರು ಇಲ್ಲಿ ಕೂಡ್ರುಬಹುದು. ಒಂದೆರಡು ತಿಂಗಳ ಮುಂಚಿತವಾಗಿಯೇ ತಿಕೀಟುಗಳನ್ನು ಕೊಳ್ಳಬೇಕಾಗುತ್ತದೆ. ಕಾರ್ಯಕ್ರಮಗಳೂ ಹಂಚಲ್ಪಡುತ್ತಿವೆ. ಮಧ್ಯಾಹ್ನದ ಫಲಹಾರದ ವ್ಯವಸ್ಥೆಯೂ ಆ ಸ್ಥಳದಲ್ಲಿಯೇ ಆಗುವಂತೆ ಏರ್ಪಾಡಿವೆ. ಕುಸ್ತಿಯು ನಿಯಾಮಕರಿಂದ ನೇಮಿಸಲ್ಪಟ್ಟ ಜನರು ಯಾವ ನಿರ್ಣಯವನ್ನು ಕೊಡುವರೋ ಅದೇ ಕೊನೆಯದೆಂದು ಎಲ್ಲ ಜಟ್ಟಿಗಳೂ ಭಾವಿಸಿ ಹಾಗೆ ನಡೆಯುತ್ತಾರೆ. ಅದಕ್ಕಾಗಿ ಗೊಂದಲವನ್ನೆಬ್ಬಿಸಿ ಹುಂಬರಂತೆ ಬಡಿದಾಡುವದಿಲ್ಲ. ಪ್ರತಿಯೊಬ್ಬರೂ ವಿದ್ಯಾವಂತರಿರುವದರಿಂದ ನ್ಯಾಯಾನ್ಯಾಯಗಳ ಜ್ಞಾನದ ತೂಕವು ತಪ್ಪುವದಿಲ್ಲ. ಇಂಥ ಮಹಾ ಜನಸಮುದಾಯವನ್ನು ಕಾಯಲು ೫೦-೬೦ ಪೋಲೀಸರು ಇಲ್ಲಿ ಸಾಕಾಗುತ್ತಾರೆ. ವೀರನಾದ ಜಟ್ಟಿಯು ತನ್ನ ಆಢ್ಯತೆಯಿಂದ ಸಲ್ಲದ ಶಕ್ತಿಪ್ರದರ್ಶನವನ್ನು ವ್ಯರ್ಥವಾಗಿ ಜನರ ಮೇಲೆ ಎಂದಿಗೂ ತೋರಿಸನು. ಇಂಥ ಪ್ರದರ್ಶನದಲ್ಲಿ ೫ ಲಕ್ಷ ರೂ. ಗಳ ಉತ್ಪತ್ತಿಯಾಗುತ್ತದೆ. ಪ್ರದರ್ಶನದ ವೆಚ್ಚವು ಹೋಗಿ, ಭಾಗ ವಹಿಸಿದ ಪ್ರತಿಯೊಬ್ಬ ಜಟ್ಟಿಗೂ ಲಾಭವನ್ನು ಹಂಚುತ್ತಾರೆ. "ಮಹಾವೀರ"ನಾದವನಿಗೆ ಒಂದು ಲಕ್ಷ ರೂಪಾಯಿಗಳ ವರೆಗೆ ದೊರೆಯುವುದು. ಇವನಿಗೆ ಅನೇಕಾನೇಕ ಕಾಣಿಕೆಗಳು ಬರುವವು. ಈ ವರುಷ ಮಹಾವೀರನಾದ "ಫುತಭಯಾಮ"ನಿಗೆ ೨೦ ಸಾವಿರ ರೂಪಾಯಿ ಬೆಲೆಬಾಳುವ ಬಹುಮಾನಗಳು ದೊರೆತವು. ಇವುಗಳಲ್ಲಿ ೧೪೦ ಡಝನ್ ಬೀರು ಬಾಟಲಿಗಳೂ ಸಹ ಇದ್ದುವು.

ಕೊನೆಯ ಕುಸ್ತಿಯ ಪಂದ್ಯಾಟದ ಕಾಲಕ್ಕೆ ಜನರು ಶಾಂತರೀತಿಯಿಂದಿರುವರು. ಕಲ್ಲೆಸೆಯುವುದು, ಕೂಗಾಡುವುದು, ಬೈಯುವುದು ಮೊದಲಾದ ಅಸಭ್ಯ ರೀತಿಗಳು ಜಪಾನಿನಲ್ಲಿ ನಡೆಯಲಾರವು. (ಈ ಪುಸ್ತಕದ ಗ್ರಂಥಕರ್ತನು ನಾಲ್ಕು ಸಲ ರೋಗೋಕುನಲ್ಲಾಗುವ ಕುಸ್ತಿಯ ಪಂದ್ಯಾಟವನ್ನು ನೋಡಿರುತ್ತಾನೆ.) ಸಾವಿರಾರು ಸ್ತ್ರೀಯರೂ ಸಹ ಪ್ರೇಕ್ಷಕರಾಗಿ ಬರುತ್ತಾರೆ. ಅಂಥ ಸಮೂಹದಲ್ಲಿ ಸ್ತ್ರೀಯರ

ಬಗ್ಗೆ ಮನಸ್ಸಿಗೆ ಹೇಯವುಂಟಾಗುವಂಥ ಯಾವ ದೃಶ್ಯವೂ ಗ್ರಂಥಕರ್ತನ ಕಣ್ಣಿಗೆ ಬೀಳಲಿಲ್ಲ.

ಇಲ್ಲಿಯ ಜಟ್ಟಿಗಳು ಸಾಧಾರಣ ಜಪಾನಿಯರಿಗಿಂತ ಎತ್ತರವಾಗಿ, ಗಾತ್ರದಲ್ಲಿ ಭಾರತೀಯ ಮಲ್ಲರನ್ನೇ ಹೋಲುತ್ತಾರೆ. ಜಟ್ಟಿಗಳು ಬೌದ್ಧಧರ್ಮೀಯರಾದುದರಿಂದ ೧೧ ದಿನಗಳ ಕುಸ್ತಿಯ ಕಾಲದಲ್ಲಿ "ನಾಲ್ಕು ಕಾಲಿನ" ಪ್ರಾಣಿಗಳ ಮಾಂಸವನ್ನು ತಿನ್ನುವದಿಲ್ಲ. ಇವರು ಮಾತ್ರ ತಲೆಯನ್ನು ಉಳಿದ ಜಪಾನಿಯರಂತೆ ಬೋಳಿಸದೆ, ತಮ್ಮ ಹಿಂದಿನ ಪದ್ಧತಿಯನ್ನು ಅನುಸರಿಸುತ್ತಲಿರುವರು.

ಇಲ್ಲಿಯ ಜಟ್ಟಿಗಳು ನಿಜವಾದ ವೀರರಂತೆ ವರ್ತಿಸುವದರಿಂದ ಜನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದಾರೆ. ಲಂಚದಾಸೆಗಾಗಿ ನೆರೆಹೊರೆಯವರ ಮೇಲೆ ಹೊಲ್ಲದ ಕೆಲಸವನ್ನು ಮಾಡರು. ತಮ್ಮದೇ ಆದ ಪಂಗಡವನ್ನು ಕಟ್ಟುವ ವಿಚಾರವು ಇವರಿಗೆ ಹೊಳೆಯದು. ಆದುದರಿಂದ ಇವರು ಮಾನಮರ್ಯಾದೆಗಳಿಗೆ ಅರ್ಹರಾಗಿದ್ದಾರೆ. ತಾವು ಶಕ್ತಿವಂತರೆಂದು ಇಲ್ಲದ ಅಧ್ಯತೆಯನ್ನು ತೋರಿಸಲಾರರು. ಯಾಕಂದರೆ ಪ್ರತಿಯೊಬ್ಬನೂ ಸೈನ್ಯಶಿಕ್ಷಣದಲ್ಲಿ ಪಳಗಿದವನೇ ಅಲ್ಲವೇ? ಆದರ ದೆಸೆಯಿಂದ ಜಪಾನಿನಲ್ಲಿ ಪರಸ್ಪರ ಕಲಹಗಳು ತಲೆದೋರವು. ಈ ಜಟ್ಟಿಗಳು ಪರಸ್ತ್ರೀ ಅಪಹರಣದಂಥ ಹೇಸಿ ಕೆಲಸಕ್ಕೆ ಕೈಹಾಕರು; ಮನಸೋಲರು. ತಮ್ಮ ನೆರೆಹೊರೆಯವರ ಜಗಳದಲ್ಲಿ ಸೇರಿಕೊಂಡು, ಅನ್ಯಾಯವಿದ್ದ ಪಕ್ಷವನ್ನು ವಹಿಸಿ, ಮಾಸೆಯನ್ನು ಹುರಿಮಾಡಿ ಬಡವರ ಗೋಳಿಗೆ ಕಾರಣವಾಗಲಾರರು. ಒಂದುವೇಳೆ ಹಾಗೆ ಸಿದ್ಧರಾದರೆ, ಪೋಲೀಸ ಮಹಾಶಯರು ಕೊಡುವ ಗೌರವದಿಂದ ಅವರು ಹಿಂದಿನ ಏಳು ಜನ್ಮಗಳನ್ನು ನೆನೆದುಕೊಳ್ಳುವಂತೆಯಾಗುತ್ತಾರೆ.

## ಜುಜಿತ್ಸು (Jujitsu or Judo)

'ಜುಡೋ' ಎಂಬುದು ಹೆಸರಾದ ಒಂದು ಆಟವು; ಅಲ್ಲದೆ ಸೈನ್ಯಶಿಕ್ಷಣದ ಒಂದು ಕಲೆಯೂ ಅಹುದು. ಜಪಾನಿಯರು ಜ್ಯುಜಿತ್ಸುವನ್ನು

ಜುಡೋ ಎಂದೂ, ಪರದೇಶಿಯರು ಜುಡೋವನ್ನು ಜ್ಯೂಜಿತ್ಸುವೆಂದು ಕರೆಯುವರು; ಹೆಸರು ಎರಡಾದರೂ ಆಟವು ಒಂದೇ. ಇದನ್ನು ಆತ್ಮ ರಕ್ಷಣೆಗಾಗಿ (Self defence) ಅಭ್ಯಸಿಸಬೇಕಾಗುವದು. ಸುಮೋ ವಿಗೂ (ಕುಸ್ತಿ) ಜುಡೋವಿಗೂ ಭೇದವಿದೆ. ಸುಮೋವಿನಲ್ಲಿ ಶಕ್ತಿಯಿಂದ ಪ್ರತಿಸ್ಪರ್ಧಿಯನ್ನು ನೆಲಕ್ಕುರುಳಿಸಿದರೆ, ಜುಡೋವಿನಲ್ಲಿ ಯುಕ್ತಿಯನ್ನು ಉಪಯೋಗಿಸಬೇಕಾಗುವುದು. ಇಲ್ಲಿ ಸೂಕ್ಷ್ಮಬುದ್ಧಿಗೆ ಅವಕಾಶವಿದೆ; ಅನುಭವಶಾಲಿಯಾದವನು ಜುಡೋವನ್ನು ಬಲ್ಲ ೧೨ ಮಂದಿಯನ್ನು ಏಕಕಾಲಕ್ಕೆ ಎದುರಿಸಿ ಸೋಲಿಸಬಲ್ಲನೆಂದು ನಿರ್ಧರಿಸಿರುವರು.

ಇಂದಿನ ಜುಡೋವನ್ನು ಕಲೆಯ ರೂಪಕ್ಕೆ ತಂದ ಶ್ರೇಯಸ್ಸು ಪ್ರೊಫೆಸರ ಕಾನೋರವರಿಗೆ ಸಲ್ಲುತ್ತದೆ. ಇದೀಗ ಇವರು ಕಾಲವಾಗಿ ಮೂರು ತಿಂಗಳಾದುವು. ಇವರು ೧೮೮೬ರಲ್ಲಿ "ಕುದೋಕಾನ" ಎಂಬ ಗರಡಿಮನೆಯೊಂದನ್ನು ಸ್ಥಾಪಿಸಿದರು. ಇಲ್ಲಿ ಜುಡೋವನ್ನು ಚನ್ನಾಗಿ ಅಭ್ಯಸಿಸಿದ ಸಾವಿರಾರು ಶಿಷ್ಯರು ಜಪಾನಿನ ತುಂಬ ಈ ವಿದ್ಯೆಯನ್ನು ಹರಡುತ್ತಿದ್ದಾರೆ. ಜಪಾನವು ರಶಿಯಾ ದೇಶವನ್ನು ಗೆಲಿಯಲು ಜುಡೋ ಒಂದು ಪ್ರಬಲ ಕಾರಣವಿದೆಯೆಂದು ಬಗೆದು, ಅನೇಕ ಪರಕೀಯರು ಈ ವಿದ್ಯೆಯನ್ನು ಕಲಿತುಕೊಂಡಿದ್ದಾರೆ. ಎಲ್ಲ ಶಾಲೆ-ಕಾಲೇಜುಗಳಲ್ಲಿ ಜುಡೋವು ಕಲಿಸಲ್ಪಡುವುದಲ್ಲದೆ ಕೆಲವು ಶಾಲೆಗಳಲ್ಲಿ ಒತ್ತಾಯ ದಿಂದಲೂ ಕಲಿಸಲಾಗುತ್ತದೆ.

## ಕೆನ್‌ದೊ (ಜಪಾನಿಯರ ಕತ್ತಿಸಾಧನ)

ಇಲ್ಲಿಯ ಪೂರ್ವಕಾಲದ ಕ್ಷತ್ರಿಯರು ಕತ್ತಿಸಾಧನೆಯಲ್ಲಿ ಹೆಚ್ಚು ಪ್ರವೀಣರಿದ್ದರು. ನವನಾಗರಿಕತೆಯ ಆಯುಧಗಳ ನಿರ್ಮಿತಿಯಿಂದ ಈ ವಿದ್ಯೆಯೂ ಹಿಂದೆ ಬಿದ್ದಿತು. ಆದರೂ ಪೂರ್ವಕಾಲದ ಕಲೆಗಳಿಗೆ ತಕ್ಕ ಮರ್ಯಾದೆಯು ಈಗಲೂ ದೊರೆಯುವುದರಿಂದ ವರುಷಕ್ಕೆ ೩೦ ಸಾವಿರ ವಿದ್ಯಾರ್ಥಿಗಳಿದನ್ನು ಐಚ್ಛಿಕ ವಿಷಯವೆಂದು (optional subject) ಅಭ್ಯಸಿಸುತ್ತಲಿರುವರು.

## ಪಾಶ್ಚಿಮಾತ್ಯರ ಆಟಗಳು

೧೯೧೨ರಲ್ಲಿ ಸ್ಟಾಕ್‌ಹೋಮಿನಲ್ಲಿ ಜರುಗಿದ ೫ನೆಯ ಆಲೆಂಪಿಕ್ ಪಂದ್ಯಾಟದಲ್ಲಿ ಜಪಾನಿಯರು ಮೊಟ್ಟಮೊದಲು ಭಾಗವಹಿಸಿದರು. ಓಡುವುದರಲ್ಲಿ ಭಾಗವಹಿಸಿದ್ದ ಜಪಾನಿಯರಿಬ್ಬರೂ ಸೋತರು. ಸೋಲಿಗೆ ಎದೆಗುಂದದೆ ನಿಷ್ಣಾತರಾಗಲು ಅನೇಕ ಜಪಾನಿಯರು ಕೈತೊಳಕೊಂಡು ಬೆನ್ನುಹತ್ತಿದರು. ೧೯೨೦ರಲ್ಲಿ ಆ್ಯಂಟ್ವರ್ಪಿನಲ್ಲಿ ನಡೆದ ಆಲೆಂಪಿಕ್ ಆಟಗಳಲ್ಲಿ ಜಪಾನಿನಿಂದ ೧೫ ಜನರು ಹೋಗಿದ್ದರು. ಟೆನಿಸ್ ಆಟವೊಂದರಲ್ಲಿ ಗೆದ್ದು, ೨ನೆಯ ನಂಬರನ್ನು ದೊರಕಿಸಿ ಜಪಾನಿಗೆ ಕೀರ್ತಿಯನ್ನು ತಂದರು. ಆ್ಯಂಟ್ವರ್ಪಕ್ಕೆ ಹೋಗುವ ಮೊದಲೆ ಅಮೇರಿಕಾ, ಇಂಗ್ಲಂಡಗಳಲ್ಲಿ ಕಲಿತು ಅಂತರ್‌ರಾಷ್ಟ್ರೀಯ ಸ್ನೇಹವನ್ನೂ ಸಂಪಾದಿಸಿಕೊಂಡಿದ್ದರು.

ಇದನ್ನು ಕಂಡು ೧೯೧೨ರಲ್ಲಿಯೇ ಫಿಲಿಫೈನ್ ದೇಶದವರು ದೂರದ ಪೂರ್ವದವರ (far-eastern) ಆಟಗಳ ಸ್ಪರ್ಧೆಯನ್ನು ಮನಿಲಾದಲ್ಲಿ ಏರ್ಪಡಿಸಿದರು. ಇಲ್ಲಿ ಇಬ್ಬರೂ ಜಪಾನಿಯರು ಓಡುವುದರಲ್ಲಿ ಗೆದ್ದರು. ೧೯೧೫ರಲ್ಲಿ ಇಂಥ ಆಟಗಳು ಷಾಂಘಾಯಿಯಲ್ಲಿ ಜರುಗಿದುವು. ಅಲ್ಲಿಗೆ ೧೧ ಜಪಾನೀಯರು ಹೋಗಿ, ಈಸುವುದು ಮತ್ತು ಹಲವು ತರದ ಓಟದಲ್ಲಿ ಗೆದ್ದರು. ೧೯೧೭ರಲ್ಲಿ ಇಂಥವೇ ಆಟಗಳು ಟೋಕಿಯೊ ಪಟ್ಟಣದಲ್ಲಿ ಆದುವು. ಇದರಲ್ಲಿ ೧೪೭ ಚೀನಿಯರು, ೧೦೪ ಫಿಲಿಫೈನ್‌ದವರು, ೧೪೦ ಜಪಾನಿಯರು ಭಾಗವಹಿಸಿದ್ದರು. ಒಟ್ಟು ಆಟಗಳಲ್ಲಿ ಜಪಾನಿಯರು ೧೨೦, ಫಿಲಿಫೈನ್‌ದವರು ೮೦, ಚೀನಿಯರು ೪೯ ಪಾಯಿಂಟುಗಳನ್ನು ಸಂಪಾದಿಸಿದರು. ಈಗಿನ ಚಕ್ರವರ್ತಿಗಳೂ, ಮುಖ್ಯ ಮಂತ್ರಿಯಾದ ಕೆರಾಹುಚಿಯವರೂ ನೋಟಕರಾಗಿ ದಯಮಾಡಿಸಿದ್ದರು. ಪಾಶ್ಚಿಮಾತ್ಯ ಆಟಗಳಲ್ಲಿ ಜಪಾನಿಯರು ಜಯವನ್ನು ಪಡೆದುದಕ್ಕೆ ದೇಶಕ್ಕೆ ದೇಶವೇ ಸಂತೋಷಸಾಗರದಲ್ಲಿ ಮುಳುಗಿತು. ಇದರಂತೆ ಓಸಾಕಾ ನಗರಸಭೆಯವರೂ ೩ಲಕ್ಷ ಎನ್ನು ವೆಚ್ಚಮಾಡಿ ಇಂಥ ಆಟಗಳನ್ನು ಜರುಗಿಸಿದರು. ಅಲ್ಲಿಯೂ ಜಪಾನಿಯರೇ ಜಯಶೀಲರಾದರು.

೧೯೨೪ರಲ್ಲಾದ ಆಲೆಂಪಿಕ್ ಪಂದ್ಯಾಟಗಳಲ್ಲಿ ಓಡುವುದರಲ್ಲಿ,

ಈಸುವುದರಲ್ಲಿ ಜಪಾನಿಯರೇ ಪ್ರಥಮಸ್ಥಾನವನ್ನು ಪಡೆದು "ಉದಯಿಸುವ ಸೂರ್ಯ"ನ ಬಾವುಟವನ್ನು ಆಲೆಂಪಿಕ್ ಕಟ್ಟಡದ ಮೇಲೆ ಹಾರಾಡುವಂತೆ ಮಾಡಿದರು. ಸರಕಾರದಿಂದ ಉತ್ತೇಜನವೂ ದೊರೆಯತೊಡಗಿ ೧೯೨೮ರಲ್ಲಿ ಹಾಲಂಡಿನಲ್ಲಾದ ಪಂದ್ಯಾಟಗಳಿಗೆ ಜಪಾನು ಸರಕಾರವು ೪೮ ಆಟಗಾರರನ್ನು ಕಳಿಸಿತು. ಅವರ ವೆಚ್ಚವೆಂದು ೫೦ ಸಾವಿರ ಎನ್ನು ವೆಚ್ಚಮಾಡಿತು. ಇವರು ಮೈದಾನದಾಟಗಳಲ್ಲಿ ೨೦, ಈಜುವುದರಲ್ಲಿ ೧೮ ಪಾಯಿಂಟಗಳನ್ನು ಸಂಪಾದಿಸಿದರು.

೧೯೩೨ರಲ್ಲಿ ಲಾಸ್ ಎಂಜೆಲ್ಸದಲ್ಲಿ ನಡೆದ ಆಲೆಂಪಿಕ್ಕಿಗೆ ಜಪಾನದಿಂದ ೧೩೨ ಆಟಗಾರರು ಹೋಗಿದ್ದರು. ಅಲ್ಲಿ ೭ ಪ್ರಥಮಸ್ಥಾನಗಳನ್ನು (championship) ೭ ದ್ವಿತೀಯ ಸ್ಥಾನಗಳನ್ನು, ೪ ತೃತೀಯ ಸ್ಥಾನಗಳನ್ನು ಜಪಾನಿಯರು ಪಡೆದರು. ೧೯೩೬ರ ಆಲೆಂಪಿಕ್ಕನ್ನು ತಮ್ಮ ದೇಶಕ್ಕೆ ಕೊಡಬೇಕೆಂದು ಮಹತ್ ಪ್ರಯತ್ನ ಮಾಡಿದರು; ಆದರೆ ಆಲೆಂಪಿಕ್ ಸಂಘವು ಬರ್ಲಿನ್ ನಗರವನ್ನು ಆರಿಸಿದ್ದರಿಂದ ಜಪಾನಿಯರು ಸುಮ್ಮನಾದರು.

ಈ ಬರ್ಲಿನಕ್ಕೆ ಜಪಾನು ೨೪೮ ಆಟಗಾರರ ತಂಡವನ್ನೇ ಕಳಿಸಿತ್ತು. ಇದರಲ್ಲಿ ೧೯ ಸ್ತ್ರೀಯರಿದ್ದರು. ಒಟ್ಟು ೧೩ ಆಟಗಳಲ್ಲಿ ಇವರು ೬ ಪ್ರಥಮಸ್ಥಾನ, ೪ ದ್ವಿತೀಯ ಸ್ಥಾನ, ೮ ತೃತೀಯ ಸ್ಥಾನಗಳನ್ನು ಪಡೆದರು. ಶ್ರೀಮತಿ ತಿ. ಮಹತಳು ಮೊದಲನೆಯ ಸಲಕ್ಕೆ ಈಜುವುದರಲ್ಲಿ (200 metre breast stroke) ಜಯವಂತಳಾಗಿ ಜಪಾನಿಯ ಮಹಿಳಾವೃಂದಕ್ಕೆ ಗೌರವವನ್ನು ತಂದುಕೊಟ್ಟಳು. ೧೯೪೦ರ ಆಲೆಂಪಿಕ್ಕಾಟವು ಟೋಕಿಯೋದಲ್ಲಿ ನಡೆಯಬೇಕೆಂದು ಬರ್ಲಿನದಲ್ಲಿಯೇ ನಿಶ್ಚಯಿಸಲಾಯಿತು. ಆಟಗಾರರ ಆನಂದಕ್ಕೆ ಪಾರಾವಾರವಿಲ್ಲದಾಯಿತು; ಉತ್ಸಾಹವು ಉಕ್ಕೇರಿತು. ಆದರೆ ಸೈನ್ಯದ ಖಾತೆಯವರು "ಯುದ್ಧದ ಮೂಲಕ ಕೆಲಸಕ್ಕೆ ಬಾರದ ಆಟಗಳಿಗೆ ಲಕ್ಷಾಂತರ ರೂಪಾಯಿ ವೆಚ್ಚಮಾಡುವುದು ವ್ಯರ್ಥವು" ಎಂದು ಸಾರಿದ್ದರಿಂದ ೧೯೪೦ರ ಆಲೆಂಪಿಕ್ಕಾಟವು ಇವರ ಕೈಯಿಂದ ಜಾರಿತು. ಸದ್ಯದ ಪರಿಸ್ಥಿತಿಯಲ್ಲಿ ಇನ್ನು

ಹತ್ತಾರು ವರುಷ ಈ ಆಟವು ಏಶಿಯಾಖಂಡದಲ್ಲಿ ಜರುಗಲಾರದೆಂದು ಭಾವಿಸಲಾಗಿದೆ.

## ಬೇಸ್‌ಬಾಲ್

ಈ ಆಟವು ಅಮೇರಿಕೆಯದು; ಮನರಂಜಿತವಾದ ಆಟವು. ಅದೀಗ ಜಪಾನಿನ ತುಂಬ ಹರಡಿರುವುದು. ಮೊದಲಿಗೆ ಸುಮೋವು ರಾಷ್ಟ್ರದ ಆಟವಾಗಿತ್ತು (National game). ಆದರೀಗ ಬೇಸ್‌ಬಾಲ್ ಆಟವು ಅದರ ಜಾಗೆಯನ್ನು ಆಕ್ರಮಿಸಿದೆ. ೧೮೭೨ರಲ್ಲಿ ಇದು ಇಲ್ಲಿ ಕಾಲಿಟ್ಟಿತು. ಈಗ ಅದರ ಪ್ರಸ್ಥವೂ ಪ್ರಾಶಸ್ತ್ಯವೂ ಮಿತಿಮೀರಿವೆ. ೧೯೦೩ರಲ್ಲಿ ಜಪಾನಿಯರು ಅಮೇರಿಕದ ಬೇಸ್‌ಬಾಲ್ ಆಟಗಾರರನ್ನು ಆಮಂತ್ರಿಸಿ ತಮ್ಮ ಜನರ ಹುರುಪನ್ನು ಇಮ್ಮಡಿಗೊಳಿಸಿದರು.

೬ ಟೋಕಿಯೋ ವಿಶ್ವವಿದ್ಯಾನಿಲಯಗಳು ವರುಷದಲ್ಲಿ ೨ ಸಲ ಈ ಬೇಸ್‌ಬಾಲ್ ಪಂದ್ಯಾಟದಲ್ಲಿ ತೊಡಗುವವು. ವಸದಾ-ಕೇಯೋ ವಿಶ್ವವಿದ್ಯಾನಿಲಯಗಳ ಆಟಗಾರರ ಆಟವು ಬಲು ಹೆಸರಾದುದು. ಜಪಾನಿಯರು ಇದನ್ನು ಕೆಂಬ್ರಿಜ್-ಆಕ್ಸಫರ್ಡಗಳಲ್ಲಿ ನಡೆಯುವ 'ರೀಗಾತ್' ದೊಡನೆ ಹೋಲಿಸುವರು. ಈ ಕಾಲಕ್ಕೆ ಮೋಜೀ ಮೈದಾನದಲ್ಲಿ ೬೦ ಸಾವಿರ ಪ್ರೇಕ್ಷಕರು ಕಲೆಯುವರು. ಇದರಿಂದ ಈ ಆಟವು ಎಷ್ಟು ಜನಮನರಂಜಿತವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಇದಲ್ಲದೆ ೬ ಉದ್ಯೋಗದ ಬೇಸ್‌ಬಾಲ್ (professional teams) ಟೀಮುಗಳಿವೆ. ಇವೂ ಜನಮೆಚ್ಚುಗೆಗೆ ಪಾತ್ರವಾಗಿವೆ.

## ಟೆನ್ನಿಸ್ (Tennis)

ಇಲ್ಲಿ ಟೆನ್ನಿಸ್ ಆಟವು ಇಪ್ಪತ್ತು ವರುಷಗಳಿಂದ ಪ್ರಚಾರಕ್ಕೆ ಬಂದಿದೆ. ಇದರಲ್ಲಿ ಮೆತ್ತನ್ನ ಚೆಂಡಿನದು (Soft ball), ಗಟ್ಟಿಯಾದ ಚೆಂಡಿನದು (Hard ball) ಎಂಬವೆರಡು ವಿಧಗಳಿವೆ. ದೂರದ ಪೂರ್ವ ದೇಶದ ಆಟಗಳು ೧೯೧೫ರಲ್ಲಿ ಷಾಂಗಾಯಿನಲ್ಲಿ ಜರುಗಿದುವು. ಅಲ್ಲಿ

ಜಪಾನಿಯರು ಈ ಟೆನ್ನಿಸ್ ಆಟದಲ್ಲಿ ಮೊದಲ ಸಲವೆ ಬಹುಮಾನವನ್ನು ಪಡೆದರು.

೧೯೨೦ರಲ್ಲಿ ಛ್ಯಾಂಪ್ಯಿಯನ್ಷಿಪ್ನಲ್ಲಾದ ಸ್ಪರ್ಧೆಯಲ್ಲಿ ಜಪಾನಿಯರು ಟೆನ್ನಿಸ್ ಆಟದಲ್ಲಿ ಎರಡನೆಯ ಸ್ಥಾನವನ್ನು ಪಡೆದರು. ಮರುವರ್ಷ ಡೇವಿಸ್ ಪಂದ್ಯದಲ್ಲಿ (Davis cup tournament) ಭಾಗವಹಿಸಿ, ಮೊದಮೊದಲು ಇತರ ದೇಶದವರನ್ನು ಗೆದ್ದು, ಕಡೆಗೆ ಅಮೇರಿಕೆಯವರಿಗೆ ಸೋತರು. Only in the challenge round they were defeated) ಇವರ ಆಟವು ನೋಡುವಂತಹದಿತ್ತು. ಯುವಗುಚಿ, ಅಬೇ, ನಕನೋ ಮೊದಲಾದ ಆಟಗಾರರು ಟೆನಿಸ್ಸಿನಲ್ಲಿ ನಿಪುಣರೆಂದು ಹೆಸರಾಗಿರುವರು.

## ಬೇರೆ ಆಟಗಳು (Other Games)

### ಬೇಸ್‌ಕೇಟ್ ಬಾಲ್

ಬೇಸ್‌ಕೇಟ್ ಬಾಲನ್ನು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಅಭ್ಯಾಸಿಸುವರು. ಶಾಲೆಗಳಲ್ಲಿ ತಕ್ಕ ಏರ್ಪಾಡೂ ಇದೆ. ಈ ಆಟದ ಅಮೇರಿಕದ ಟೀಮುಗಳು ಇಲ್ಲಿ ಬಂದು ಇದನ್ನು ಹೆಚ್ಚು ಪ್ರಚುರಪಡಿಸುತ್ತಿವೆ.

### ವ್ಹಾಲಿಬಾಲ್

ಇದು ಬೇಸ್‌ಕೇಟ್ ಬಾಲಿನೊಡನೆ ಬಂದಿದ್ದರೂ ಶಾಲೆಯ ವಿದ್ಯಾರ್ಥಿನಿಯರಷ್ಟೇ ಆಡುವರು.

### ಹಾಕಿ

ಇಪ್ಪತ್ತು ವರುಷಗಳಿಂದ ಈ ಆಟವು ಜಪಾನಿನಲ್ಲಿ ತಲೆಯೆತ್ತಿದೆ. ಈ ಹಾಕೀ ಆಟದಲ್ಲಿ ಭಾರತೀಯರೂ ಗಟ್ಟಿಗರು. ಅವರ ತರುವಾಯ

ಇವರೇ ಗಟ್ಟಿಗರೆಂದು ಹೇಳಬಹುದು. ಕಳೆದ ಎರಡು ಆಲೆಂಪಿಕ್ಕಗಳಲ್ಲಿ ಜಪಾನಿಯರು ಹಾಗೆ ಆಡಿ ತೋರಿಸಿದ್ದಾರೆ. ಸದ್ಯದ ಹಾಕಿ ಚಾಂಪಿಯನ್ನರು ಟೋಕಿಯೋ ವಾಣಿಜ್ಯ ವಿಶ್ವವಿದ್ಯಾನಿಲಯದವರಾದ ಷಿಪ್ರ್ ಎಂಬವರಿರುವರು. ಬರ್ಲಿನ್ ಪಟ್ಟಣದಲ್ಲಿ ಜರುಗಿದ ಹಾಕಿ ಆಟದ ಜಪಾನಿನ ಟೀಮಿನಲ್ಲಿ ೬ ಜನ ಆಟಗಾರರು ಈ ವಿಶ್ವವಿದ್ಯಾನಿಲಯದವರೇ ಇದ್ದರು. ಫುಟಬಾಲ್ ಆಟವು ಇಲ್ಲಿ ವಿಶೇಷವಾಗಿ ಪ್ರಚಾರದಲ್ಲಿಲ್ಲ.

## ಜಪಾನ್‌ದೇಶದ ಧರ್ಮಗಳು.

ಇಂದಿಗೆ ಜಪಾನು ನವನಾಗರಿಕತೆಯಲ್ಲಿ ಪಾಶ್ಚಿಮಾತ್ಯ ದೇಶಗಳಷ್ಟೆ ಶಕ್ತಿಯುತವಾಗಿದ್ದರೂ, ಧರ್ಮ, ನೀತಿ ಮೊದಲಾದವುಗಳಲ್ಲಿ ಮಾತ್ರ ಪೌರ್ವಾತ್ಯ ದೇಶಗಳ ಬಾವುಟವನ್ನು ಹೊತ್ತುಕೊಂಡೆ ಮೆರೆಯುತ್ತಿದೆ.

ಜಪಾನಿಯರು ಯಾಂತ್ರಿಕ ಸುಧಾರಣೆಯ ಶಿಖರವನ್ನೇರಿದ್ದರೂ, ಯಾವುದಾದರೊಂದು ಧರ್ಮಾನುಯಾಯಿಗಳಾಗಿಯೇ ಇದ್ದಾರೆ. ಇವರು ಆಸ್ತಿಕರು. ಜಪಾನಿನಲ್ಲಿ ಮುಖ್ಯವಾಗಿ (೧) ಷಿಂತೋ, (೨) ಕೆನ್‌ಫೂಷಯಾನಿಝಂ (Confucianism), (೩) ಬೌದ್ಧ, (೪) ಕ್ರಿಸ್ತೀ ಹೀಗೆ ನಾಲ್ಕು ಧರ್ಮಗಳು ನೆಲೆಯೂರಿವೆ.

ಜಪಾನಿನ ಪೂರ್ವಚರಿತೆಯು ಕ್ರಿ. ಪೂ. ೭ನೆಯ ಶತಮಾನದಿಂದ ಆರಂಭವಾಗುವುದು. ಇಡಿ ದೇಶವೇ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದ್ದರಿಂದ ಆಗಿನ ಕಾಲದಲ್ಲಿ ಹೊರಗಿನ ದೇಶಗಳ ಸಂಪರ್ಕವಿಲ್ಲದೆ ತನ್ನಷ್ಟಕ್ಕೆ ತಾನೇ ಇತ್ತು.

ಪ್ರಾಚೀನಕಾಲದಲ್ಲಿ ಅವ್ಯವಸ್ಥೆಯ ಧರ್ಮವು (unorgeanised worship) ಇಲ್ಲಿ ನೆಲೆಸಿತ್ತು. ಬರಬರುತ್ತ ಶೂರತ್ವವನ್ನು, ಹಿರಿಯರನ್ನು ಪೂಜಿಸತೊಡಗಿದರು. ಈ ಪದ್ಧತಿಯೇ "ಷಿಂತೋಧರ್ಮ"ವಾಗಿ ಪರಿಣಮಿಸಿತು. ಇನ್ನೊಂದರ್ಥದಲ್ಲಿ "ದೇವರ ಮಾರ್ಗ" (the way of Gods) ವೆಂದೂ ವ್ಯಕ್ತವಾಗುವದು. ವಾಡಿಕೆಯಾದ ಈ ಧರ್ಮವು

ಚಕ್ರವರ್ತಿಯೇ ದೇವರು, ಅವನಿಗಿಂತ ಮಿಗಿಲಾದ ದೈವತವು ಇನ್ನಿಲ್ಲ. ಪ್ರಜೆಗಳೆಲ್ಲರೂ ಅವನಾಧೀನರಾಗಿ ಆಜ್ಞಾನುವರ್ತಿಗಳಾಗಬೇಕು" ಎಂದು ಮುಂತಾಗಿ ಬೋಧಿಸುವದು. ಮೂರ್ತಿಗಳ ಬದಲಾಗಿ "ಒಂದು ದುಂಡನ್ನ ಕನ್ನಡಿ, ಒಂದು ಮುತ್ತು ಇಲ್ಲವೆ ಒಂದು ಕತ್ತಿಯನ್ನು ದೇವರು" ಎಂದು ಪೂಜಿಸಲಾಗುವುದು.

ಭಾರತದಲ್ಲಿ ಬೌದ್ಧಧರ್ಮವು ತಲೆದೋರಿದ ಕಾಲಕ್ಕೆ, ಚೀನಾ ದೇಶದಲ್ಲಿ ಕನ್‌ಫ್ಯೂಷಿ ಎಂಬ ಮಹದ್ವ್ಯಕ್ತಿಯು ನೀತಿಮಯವಾದ ಒಂದು ಧರ್ಮವನ್ನೆ ಸ್ಥಾಪಿಸಿ ಹೆಸರುವಾಸಿಯಾದನು. ಜಪಾನಿನಲ್ಲಿ ಪರದೇಶದಿಂದ ಬಂದ ಧರ್ಮಗಳಲ್ಲಿ ಇದೇ ಮೊದಲನೆಯದು. ನೀತಿತತ್ವವೇ ಈ ಧರ್ಮದ ಅಡಿಗಲ್ಲಾದ್ದರಿಂದ ಶಾಸ್ತ್ರೋಕ್ತವಾದ ಧರ್ಮವೆಂದು ಇದು ಕರೆಯಲ್ಪಡುವದಿಲ್ಲ. ಈ ಕನ್‌ಫ್ಯೂಷಿಯಾನಿಝಮ್ ತತ್ವದ ಮೂಲಕ ಜನರು ನೀತಿಪರರಾದರು. ಅದರಿಂದ ರಾಜ್ಯದಾಡಳಿತವು ಸುಸೂತ್ರವಾಗಿ ಸಾಗಲನುಕೂಲವಾಯಿತು.

ಕ್ರಿ. ಶ. ೫೫೨ರಲ್ಲಿ ಕೋರಿಯಾದ ಚಕ್ರವರ್ತಿಯು ಜಪಾನ ದೇಶವು ಸುಧಾರಿಸಲೆಂದು ಬುದ್ಧದೇವನ ಪ್ರತಿಮೆ, ಶಾಸ್ತ್ರಗಳು, ಲೌಕಿಕ ಸಂಪತ್ತಿಗೆ ಸಾನುಕೂಲವಾಗುವ ಸಾಮಾನು ಮೊದಲಾದವುಗಳನ್ನು ಜಪಾನಿನ ಚಕ್ರವರ್ತಿಗೆ ಒಪ್ಪಿಸಿದನು. ಆಗ ಅವನು ಬೌದ್ಧಧರ್ಮದ ವಿಷಯವಾಗಿ ಈ ರೀತಿಯಾಗಿ ಹೇಳಿರುವನು :—

This religion (····Sanskrit Dharma) is the most excellent of all teaching, though difficult to master and hard to comprehend; even the sages of China would have found it not easy to grasp It brings endless and immeasurable blessings and fruits (to its believers), even the attainment of the supreme enlightenment (Bodhi). Just as the

Chintamani jewel is said fulfil every need according to desire, so the treasures of the glorious religion will never cease to give full response to those who seek for it. More over, the religion has come over to Korea far from India, and the people (in the countries between these two) are now ardent followers if its teaching and none are outside its call.

ಬೌದ್ಧಧರ್ಮವು ಜಪಾನಿನಲ್ಲಿ ಸ್ಥಾಯಿಯಾಗಲು ಎರಡು ಕಾರಣಗಳಿವೆ. (೧) ಮತಪ್ರಚಾರಕ್ಕೆ ಬಂದ ಬೌದ್ಧಸನ್ಯಾಸಿಗಳು ಕೈಗಾರಿಕೆಗಳಿಗೆ ಪುನರ್ಜನ್ಮವನ್ನಿತ್ತು ಆರ್ಥಿಕ ವಿಪ್ಲವವನ್ನು ಕಡಿಮೆ ಮಾಡಿದರು. ರೋಗಿಗಳಿಗೆ ಔಷಧವನ್ನಿತ್ತು ಗುಣಪಡಿಸಿದರು. (೨) ಬೌದ್ಧಧರ್ಮವು ಇಲ್ಲಿ ಕಾಲಿಟ್ಟ ೫೦ ವರುಷಗಳೊಳಗೆ "ಷೊಂಕೋತು" ರಾಜನು ಈ ಧರ್ಮವನ್ನು ಸ್ವೀಕರಿಸಿ ರಾಜಮನ್ನಣೆಯನ್ನಿತ್ತನು. ಜನಸಮುದಾಯವೂ ರಾಜನನ್ನನುಸರಿಸಿತು. ಈ ಸನ್ಯಾಸಿಗಳು ರಾಜಕೀಯ ಕ್ಷೇತ್ರದಲ್ಲಿ ಸೇರದೆ ಕೇವಲ ಮತಪ್ರಚಾರ–ಪ್ರಸಾರಗಳನ್ನೇ ಮಾಡಿದುದರಿಂದ ರಾಜಸತ್ತೆಯಿಂದ ತೊಂದರೆಯುಂಟಾಗಲಿಲ್ಲ.

ಜಪಾನವು ಬೌದ್ಧಧರ್ಮದಿಂದ ಇಹ-ಪರ ವಿದ್ಯೆಗಳಲ್ಲಿ, ಸಂಸ್ಕಾರ ಸಂಪನ್ನ ನಾಗರಿಕತೆಯಲ್ಲಿ ಮುಂದುವರಿದಿತು. ಕ್ರಿ. ಶ. ೫೯೩ರಲ್ಲಿ ಪಟ್ಟವೇರಿದ "ಷೊಂಕೋತು" ರಾಜನು ಬೌದ್ಧಧರ್ಮಪ್ರಚಾರಕ್ಕಾಗಿ ಬಲು ಹೆಣಗಾಡಿದನು. ಅಶೋಕ ಚಕ್ರವರ್ತಿಯಂತೆ ಈತನೂ ರುಗ್ಣಾಲಯ, ಭಾವಿ, ರಸ್ತೆ, ಧರ್ಮಛತ್ರ ಮೊದಲಾದ ಜನೋಪಕಾರಿಯಾದ ಕಾರ್ಯಗಳನ್ನೆಸಗಿದ್ದರಿಂದ, ಜಪಾನಿಯರು ಇವನಿಗೆ "ಜಪಾನಿನ ಅಶೋಕ ಮಹಾರಾಯ" ಎಂದು ಇಂದಿಗೂ ಕರೆಯುತ್ತಾರೆ. ೬೦೭ರಲ್ಲಿ ಷೊಂಕೋತು ರಾಜನ ಆಜ್ಞೆಯಂತೆ "ನಾರಾ" ಪಟ್ಟಣದಲ್ಲಿ ಸುಂದರ

ವಾದ ಬೌದ್ಧದೇವಾಲಯವೊಂದು ಕಟ್ಟಲ್ಪಾಯಿತು. ಅಲ್ಲಿ ಕೆತ್ತಲ್ಪಟ್ಟ ವಿಗ್ರಹಗಳು, ಚಿತ್ರಗಳು ಇಂದಿಗೂ ಅಚ್ಚಳಿಯದುಳಿದಿರುವವು. ಇವು ಅಜಂತೆಯ ಚಿತ್ರಗಳಿಗೆ ಸರಿಸಮಾನವಿರುವವೆಂಬ ಹೆಮ್ಮೆಯಿಂದ ಅವುಗಳನ್ನು ಬಹು ಜೋಪಾನದಿಂದ ಕಾಪಾಡುತ್ತಲಿದ್ದಾರೆ.

ಬೌದ್ಧಧರ್ಮದ "ಮಹಾಯಾನ ಪಂಥವೇ" ಇಲ್ಲಿ ಪ್ರಚುರವಾಗಿದೆ. ಇದೀಗ ಅದು ೧೧ ಶಾಖೆಗಳಾಗಿ ವಿಂಗಡಿಸಿದೆ. ಇಂದಿನ ಜಪಾನಿನ ಬೌದ್ಧಧರ್ಮವು ಮೊದಲಿನಂತಿರದೆ, ಬೇರೆ ತರದ್ದಾಗಿದೆ. ಭಾರತದಲ್ಲಿ ಈ ಧರ್ಮವು ವೈಯಕ್ತಿಕವಾಗಿದ್ದರೆ, ಜಪಾನಿನಲ್ಲಿ ಸಾಮೂಹಿಕವಾಗಿದೆ. ಕಳೆದ ೧೫ ಶತಮಾನಗಳಿಂದ ಬೌದ್ಧಧರ್ಮವು ಬೆಳೆಯುತ್ತ ಬಂದಿರುವದರಿಂದ ಇಂಡಿಯಾ, ಚೈನಾಗಳಲ್ಲಿ ಸಿಕ್ಕದಿರುವ ಬೌದ್ಧಧರ್ಮ ಗ್ರಂಥಗಳು ಇಲ್ಲಿ ದೊರೆಯುತ್ತವೆ. ಕ್ರಿ. ಶ. ೫೯೩ರಿಂದ ೧೮೬೭ರ ವರೆಗೆ ಬೌದ್ಧಧರ್ಮವು ರಾಜಾಶ್ರಯವನ್ನು ಹೊಂದಿ, ಉಳಿದ ಮತಗಳಿಗಿಂತ ಉನ್ನತಸ್ಥಿತಿಯನ್ನು ಪಡೆದಿರುವುದು.

## ಕ್ರಿಸ್ತಧರ್ಮ

ಕ್ರಿಸ್ತಧರ್ಮವು ೧೫೪೯ರಲ್ಲಿ ಮೊಟ್ಟಮೊದಲು ಜಪಾನಿನಲ್ಲಿ ಕಾಲು ಇಟ್ಟಿತು. ಈ ಮತಪ್ರಚಾರಕ್ಕೆ ಇಂಡಿಯಾದಿಂದ ಎಕ್ಸಿವಿಯರ ಎಂಬ ಪಾದ್ರಿಯು ಬಂದು ಕೆಲವು ವರುಷಗಳಲ್ಲಿಯೆ ಲಕ್ಷಾಂತರ ಜಪಾನಿಯರನ್ನು ಕ್ರಿಸ್ತಧರ್ಮಕ್ಕೆ ಪರಿವರ್ತಿಸಿದನು. ದೇಶದಲ್ಲಿ ಶಾಂತ ವಾತಾವರಣ ವಿದ್ದುದಾದರೆ ಇನ್ನೂ ಲಕ್ಷಾವಧಿ ಜನರು ಈ ಧರ್ಮಕ್ಕೆ ಬಲಿಬೀಳಬಹುದಾಗಿತ್ತು. ಆದರೆ ಈಪಾದರಿಗಳು ರಾಜಕೀಯ ಕ್ಷೇತ್ರದಲ್ಲಿ ಸೇರಿಕೊಂಡದ್ದರಿಂದ ಪಾಳೆಯಗಾರರು ಇವರ ಆಟವು ಸಾಗದಂತೆ ಮಾಡಿದರು. ಒಮ್ಮೆ ೨೫ ಸಾವಿರ ಕ್ರಿಸ್ತರು ಸರಕಾರದ ಮೇಲೆಯೆ ದಂಗೆಯೆದ್ದರು. ಸರಕಾರವು ಕಷ್ಟಬಟ್ಟು ಅವರನ್ನೆಲ್ಲ ಶಿಕ್ಷಿಸಿತು. ಪರದೇಶದ ಪಾದರಿಗಳು ಜಪಾನಿನಲ್ಲಿ ಬರದಂತೆಯೂ, ಜಪಾನಿಯರಾರೂ ಕ್ರಿಸ್ತಧರ್ಮವನ್ನು ಸ್ವೀಕರಿಸದಂತೆಯೂ ಕಟ್ಟಳೆಯಾಯಿತು. ಜನರನ್ನು ಪರೀಕ್ಷಿಸಲು ಸರಕಾರವು ಬೀದಿಯಲ್ಲಿ

"ಮೇರಿಯ ಪ್ರತಿಮೆ"ಯನ್ನು ಹಾಕಿಸಿ, ಅದನ್ನು ಎಲ್ಲರೂ ತುಳಿದು ಕೊಂಡು ಹೋಗಬೇಕೆಂದು ಆಜ್ಞಾಪಿಸಿತು. ತುಳಿಯದವರು ಗಲ್ಲಿಗೆ ಏರಿಸಲ್ಪಟ್ಟರು. ವ್ಯಾಪಾರಸ್ಥರ ವೇಷಧಾರಿಗಳಾದ ೨೬ ಪಾಶ್ಚಿಮಾತ್ಯ ಪಾದರಿಗಳು ಸಜೀವವಾಗಿ ಸುಲಿಯಲ್ಪಟ್ಟರು. ಸರಕಾರವು ಇನ್ನೂ ಶಾಂತವಾಗದೆ, ಡಚ್ಚರೊಬ್ಬರನ್ನು ಬಿಟ್ಟು, ಬಿಳಿ ಜನಾಂಗದವರು ವ್ಯಾಪಾರಕ್ಕೂ ಸಹ ಜಪಾನಿನ ಬಂದರದ ಪಟ್ಟಣಗಳಿಗೆ ಬರಕೂಡದೆಂದು ಕಟ್ಟಪ್ಪಣೆಯನ್ನು ಸಾರಿತು. ಹೀಗೆ ಈ ಕಟ್ಟಪ್ಪಣೆಯು ೧೮೫೩ರ ವರೆಗೆ ಅಮಲಿನಲ್ಲಿತ್ತು.

೧೮೬೮ರಲ್ಲಿ ಸ್ಥಾಪಿತವಾದ ಮೇಜಿ ಚಕ್ರವರ್ತಿಗಳ ಸರಕಾರವು ದೇಶ-ಜನಾಂಗಗಳು ಮುಂದುವರಿಯಬೇಕಾದರೆ, ಕಂದಾಯದ, ಮತದ ಪದ್ಧತಿಗಳನ್ನು ಕಿತ್ತೊಗೆದು, ಯೋಗ್ಯ ಕಟ್ಟಳೆಗಳನ್ನು ಮಾಡದ ಹೊರತು ಗತ್ಯಂತರವಿಲ್ಲೆಂದು ನಿರ್ಧರಿಸಲಾಯಿತು. ಧರ್ಮದಲ್ಲಿ ತೊಡಗಿದ್ದ ಕೆಲವು ಬೌದ್ಧ ಸನ್ಯಾಸಿಗಳ ಆಸ್ತಿಪಾಸ್ತಿಯನ್ನು ಸರಕಾರವು ಮುಟ್ಟುಕೋಲು ಹಾಕಿತು. ಷಿಂತೋಧರ್ಮವು "ರಾಜನೇ ದೇವರು" ಎಂಬ ತತ್ವ ಮಾರ್ಗಿಯಾದ್ದರಿಂದ ಸರಕಾರದ ಕೃಪೆಗೆ ಪಾತ್ರವಾಯಿತು. ೧೫ ಶತ ಮಾನಗಳ ವರೆಗೆ ರಾಜಾಶ್ರಯ ಪಡೆದ ಬೌದ್ಧಧರ್ಮವು ತೊಂದರೆಗೀಡಾ ಯಿತು. ಜನಸಮುದಾಯವು ಕೆರಳಿತು. ಕಡೆಗೆ ೧೮೭೨ರಲ್ಲಿ ಸರಕಾರವು ಜನರು ಬೇಕಾದ ಧರ್ಮವನ್ನವಲಂಬಿಸಲು ಅನುಮತಿಯನ್ನು ಕೊಟ್ಟಿತು. ಈ ಪ್ರಸಂಗದಲ್ಲಿ ಕೆಲವು ಬೌದ್ಧಸನ್ಯಾಸಿಗಳು ಕಾಲಕ್ಕೆ ತಕ್ಕಂತೆ ಮತಾ ಚಾರಗಳಲ್ಲಿ ಬದಲಾವಣೆ ಮಾಡಿ ಈ ಧರ್ಮವು ಜನರ ಮೆಚ್ಚುಗೆಗೆ ಹೆಚ್ಚು ಪಾತ್ರವಾಗುವಂತೆ ಮಾಡಿದರು.

೧೮೭೨ರಲ್ಲಿ ಸರಕಾರವು ಕೊಟ್ಟ ಅನುಮತಿಯ ಮೇರೆಗೆ ಅಮೇರಿಕೆ ಯಿಂದ ಕೆಲವು ಪಾದ್ರಿಗಳು ಜಪಾನಿಗೆ ಮತಪ್ರಚಾರಕ್ಕಾಗಿ ಬಂದರು. ಇವರು ಮತಪ್ರಚಾರವಲ್ಲದೆ ಶೈಕ್ಷಣಿಕ ಕಾರ್ಯದಲ್ಲಿಯೂ ತೊಡಗಿ ದರು. ಸರಕಾರವು ಇವರಿಗೆ ಸಂಕೆಯಲ್ಲಿ ನಿಂತುಕೊಂಡು ಅಜ್ಞಜನರಿಗೆ

ಜಪಾನಿನಲ್ಲಿ ಸಾವಿರಾರು ಬೌದ್ಧ ಸನ್ಯಾಸಿಗಳು ಇದ್ದರೂ ಜನರನ್ನು ಪೀಡಿಸಿ ಹೊಟ್ಟೆಹೊರಕೊಳ್ಳುವದಿಲ್ಲ. 'ಸನ್ಯಾಸಿ' ಎಂದೆನಿಸಿಕೊಳ್ಳ ಬೇಕಾದರೆ ಅಧಿಕಾರಿಗಳ ಪ್ರಶಸ್ತಿಪತ್ರವನ್ನು ಪಡೆದಿರಬೇಕಾಗುವದು. ಗಟ್ಟಿಮುಟ್ಟಿಯಾದವನು ಸನ್ಯಾಸಿಯ ವೇಷದಿಂದ ಹೊಟ್ಟೆಹೊರಕೊಳ್ಳಲು ಸರಕಾರದ ಪ್ರತಿಬಂಧವಿರುತ್ತದೆ. ಭಿಕ್ಷೆಯಿಂದ ಉಪಜೀವಿಸುವದು ಹೇಯವೆಂಬ ಕಲ್ಪನೆ ಜಪಾನಿನಲ್ಲಿ ಬಹು ಜಾಗೃತವಿರುತ್ತದೆ. ಒಂದು ವೇಳೆ ಸದೃಢಕಾಯರಾದ ಸನ್ಯಾಸಿಗಳು ಭಿಕ್ಷಾವೃತ್ತಿಯಿಂದ ಜೀವಿಸುತ್ತಿರುವರೆಂಬ ಸುದ್ದಿಯು ಪೋಲೀಸರಿಗೆ ತಿಳಿದರೆ ಅವನನ್ನು ಬಂಧಿಸಿ, ಕಾರಖಾನೆಗಳಲ್ಲಿ ಕೆಲಸ ಬಿದ್ದಾಗ ದುಡಿಯಲು ಹಚ್ಚುವರು. ಬಡವರು ತಿರುಪೆಯಿಂದ ಬಾಳುವದಕ್ಕಿಂತ ಎಲ್ಲಿಯಾದರೂ ಹೋಗುವದೊಳಿತೆಂದು ಭಾವಿಸುವರು. ಮಂಚೂರಿಯಾ ದೇಶದಲ್ಲಿ ಇಂಥವರು ನೆಲಿಸಲು ಆಸ್ಪದವಿರುವದರಿಂದ ಸರಕಾರದ ಸಹಾಯವನ್ನು ಪಡೆದು ಅಲ್ಲಿಗೆ ತೆರಳುವರು. ಸರಕಾರವೇ ಇವರಿಗೆ ಅನುಕೂಲತೆಗಳನ್ನು ಒದಗಿಸಿಕೊಟ್ಟಿರುವದರಿಂದ, ಉಳಿದವರು ಮಾತ್ರ ಈ ತಿರುಕರಿಂದ ಸಂರಕ್ಷಿಸಲ್ಪಟ್ಟಿದ್ದಾರೆ. ಧರ್ಮದ ಹೆಸರಿನಿಂದ ಜನರನ್ನು ಸುಲಿಯುವ "ಪಂಕ್ತಿಪಠಾಣರ" ಹಾವಳಿಯು ಜಪಾನಿನಲ್ಲಿಲ್ಲ. ಬ್ರಾಹ್ಮಣರಿಗೆ ದಕ್ಷಿಣೆಯು ಸಲ್ಲದಿದ್ದರೆ, ಮೂರು ಮೈಲಿದ್ದ ಸ್ವರ್ಗವು ಆರು ಮೈಲು ದೂರವಾಗುವದೆಂಬ ಹೆದರಿಕೆಯನ್ನು ಹಾಕಿ, ದಬ್ಬಾಳಿಕೆಯನ್ನು ಮಾಡುವ "ಪರೋಪಜೀವಿ" ಗಳ (Parasite) ಗುಂಪು ಜಪಾನಿನಲ್ಲಿ ಇರುವದಿಲ್ಲ.

ಜಪಾನು ದೇಶದಲ್ಲಿರುವ ವಿವಿಧ ಧರ್ಮಗಳ, ದೇವಮಂದಿರಗಳ, ಸನ್ಯಾಸಿ, ಸನ್ಯಾಸಿನಿಯರ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ. (೧೯೩೩):—

| | ದೇವಾಲಯ. | ಸನ್ಯಾಸಿಗಳ ಸಂಖ್ಯೆ. | ಸನ್ಯಾಸಿನಿಯರ ಸಂಖ್ಯೆ. |
|---|---|---|---|
| ಬೌದ್ಧಧರ್ಮ | ೭೧೦೩೨ | ೮೪೮೦೩೧ | ೩೬೫೨ |
| ಷಿಂತೋಧರ್ಮ | ೧೫೧೧೩ | ೭೧೪೫೨ | ೩೩೦೮೭ |
| ಕ್ರಿಸ್ತಧರ್ಮ | ೨೮೮ | ೨೧೧೫ | ೫೨೦ |

ಬೌದ್ಧರ ೭೧೦೩೬ ದೊಡ್ಡ ದೇವಾಲಯಗಳಲ್ಲದೆ ೩೫೨೬೫ ಸಣ್ಣಾಪುಟ್ಟ ದೇವಾಲಯಗಳೂ ಸಹ ಇರುವವು.

೧೯೩೩ರ ಕೊನೆಗೆ ವಿವಿಧ ಮತಗಳಿಗೆ ಇದ್ದ ಅನುಯಾಯಿಗಳ ಸಂಖ್ಯೆ:—

| | ಅನುಯಾಯಿಗಳ ಸಂಖ್ಯೆ. |
|---|---|
| ಬೌದ್ಧಧರ್ಮ | ೪೬೧೨೭೩೦೭ |
| ಷಿಂತೋಧರ್ಮ | ೧೬೫೨೫೮೪೦ |
| ಕ್ರಿಸ್ತಧರ್ಮ | ೨೫೬೨೮ |

ಹೀಗೆ ಅನುಯಾಯಿಗಳಿದ್ದರೂ, ಯಾವ ಮತಗಳಿಗೂ ಅಂಟಿಗೊಳ್ಳದ ಲಕ್ಷಾಂತರ ಸಂಖ್ಯೆಯೂ ಇದೆ.

## ಜಪಾನಿಯರ ನಾಟ್ಯಕಲೆ

ಜಪಾನಿಯರ ನಾಟ್ಯಕಲೆಯು ನರ್ತನದಿಂದ ಮೊದಲಾಯಿತು. ೬೦ ವರುಷಗಳ ಹಿಂದೆ ನಾಟಕ, ಸಂಗೀತ, ನೃತ್ಯ ಮೊದಲಾದುವು ಉಚ್ಚ ತರಗತಿಯವರಿಗಾಗಿದ್ದವು. ಸ್ತ್ರೀಯರು, ಸುಂದರ ಯುವಕರು ರಂಗಭೂಮಿಯ ಮೇಲೆ ಬರಬಾರದೆಂದು ರಾಜಾಜ್ಞೆಯಿದ್ದಿತು. ಈಗ ಆ ನಿರ್ಬಂಧವು ತೆಗೆಯಲ್ಪಟ್ಟಿದ್ದರಿಂದ ಸ್ತ್ರೀಯರು ನಾಟಕಗಳಲ್ಲಿ ಬೇಕಾದ ಹಾಗೆ ಪಾತ್ರವಹಿಸುತ್ತಾರೆ.

ಜಪಾನಿಯರು ಪೌರ್ವಾತ್ಯರಾಗಿದ್ದರೂ, ಅವರ ಭಾಷೆ, ಕಲೆ ಮುಂತಾದುವು ಇನ್ನುಳಿದ ಪೂರ್ವದೇಶದವರಂತಿರದೆ, ತಮ್ಮದೇ ಆದ ಒಂದು ಬಗೆಯ ಕಲೆಯನ್ನುಂಟುಮಾಡಿ ಇಂದಿನ ವರೆಗೂ ಹಾಗೆಯೆ ಸಾಗಿಸುತ್ತ ಬಂದಿದ್ದಾರೆ. ಆದರೂ ಇವರ ಕಲೆಯು ಒಂದು ಮಟ್ಟಕ್ಕೆ ಬರಬೇಕಾದರೆ, ಭಾರತ ಹಾಗೂ ಚೀನಾ ದೇಶಗಳು ಹೆಚ್ಚು ಸಹಾಯವನ್ನು ಮಾಡಿರುವವು.

ಜಪಾನಿಯರ ನಾಟಕವು "ಕಗುರ" (Kagura) ಎಂಬ ಪವಿತ್ರ ನಾಟ್ಯದಿಂದಾರಂಭವಾಯಿತು. ಇಲ್ಲಿಯ ಪೌರಾಣಿಕ ಚರಿತ್ರೆಗಳಂತೆ ಸೂರ್ಯದೇವತೆಯು (Sun Godderss) "ತನ್ನ ಅಣ್ಣನಾದ ಸುಸಾ ನೋವಿು ಕೋಟೋ" ದೇವನ ಕಾಟವನ್ನು ತಾಳದೆ ಬಂಡೆಗಳಿಂದ ಭದ್ರಿತ ವಾದ ಸ್ವರ್ಗದಲ್ಲಿ ಅವಿತುಕೊಂಡಳು. (ಇಲ್ಲಿಯವರು ಸೂರ್ಯನನ್ನು ಹೆಣ್ಣುದೈವತವೆಂದು ತಿಳಿದು ಪೂಜಿಸುವರು.) ಆದರಿಂದ ಜಗತ್ತಿನಲ್ಲಿ ಕತ್ತಲುಗವಿಯಿತು. ಇದನ್ನು ನಿವಾರಿಸಲು "ಉಜುವಿು" ಎಂಬ ಚಿಕ್ಕ ದೇವತೆಯು ಸೂರ್ಯದೇವತೆಯು ಅಡಗಿದ ಸ್ಥಳದ ಬಾಗಿಲದಲ್ಲಿ ನರ್ತಿಸ ತೊಡಗಿದಳು. ಅದನ್ನು ನೋಡಲು ಸೂರ್ಯದೇವಿಯು ಬಾಗಿಲ ತೆರೆದು ಹೊರಬಂದಳು. ಹತ್ತಿರದಲ್ಲಿದ್ದ ದೇವತೆಗಳ ಪರಿವಾರವು ಕೂಡಲೆ ಆ ದ್ವಾರವನ್ನು ಭದ್ರವಾಗಿ ಮುಚ್ಚಿತು. ಆದರಿಂದ ಮತ್ತೆ ಜಗತ್ತಿನಲ್ಲಿ ಬೆಳಕುಂಟಾಯಿತು. ಹೀಗಿರುವ ಪುರಾಣದ ಕಥೆಯು ನಿಜವಿರಲಿ, ಇಲ್ಲ ದಿರಲಿ, ಪ್ರಾಚೀನ ಕಾಲದಲ್ಲಿ ನರ್ತನವು ಇಲ್ಲಿ ಪ್ರಚಾರದಲ್ಲಿತ್ತೆಂದು ವ್ಯಕ್ತ ವಾಗುತ್ತದೆ.

ಕ್ರಿ. ಶ. ೧೧೪೬ರಲ್ಲಿ "ನೋ" ಎಂಬ ಚೀನ ದೇಶದ ನಾಟಕವು ಜಪಾನಿಗೆ ಬಂದಿತು. (ಈ ಆಟದಲ್ಲಿ ಪಾತ್ರಧಾರಿಗಳು ಮುಖವಾಡಗಳನ್ನು ಹಾಕಿಕೊಂಡು ರಂಗಭೂಮಿಯ ಮೇಲೆ ಬರುವರು. ಆಟದ ಕಥೆಯನ್ನೆಲ್ಲ ಹಿಮ್ಮೇಳದವರು ಹೇಳುವರು. ಪಾತ್ರಧಾರಿಗಳು ಮಾತನ್ನಾಗಲಿ, ಹಾಡ ನ್ನಾಗಲಿ ಹೇಳುವ ಗೊಡವೆಗೆ ಹೋಗುವದಿಲ್ಲ). ಇಂಥ ನಾಟಕವು ಸೈನಿಕರಿಂದಲೂ, ಪಾಳೆಯಗಾರರಿಂದಲೂ ಪ್ರೋತ್ಸಾಹಿಸಲ್ಪಡುತ್ತಿದ್ದಿತು. ಸಾಮಾನ್ಯ ಜನರಿಗೆ ಇದರಲ್ಲಿ ಸಂಗೀತ, ಹಾಸ್ಯ ಹಿಡಿಯದ್ದರಿಂದ, ಅವರು ಬೇರೆ ತರಹದ ನಾಟಕಗಳನ್ನು ಕಂಡುಹಿಡಿಯಲೆತ್ನಿಸಿದರು. ೧೬೦೪ರಲ್ಲಿ "ಓಕುನಿ" ಎಂಬ ದೇವದಾಸಿಯು ಸಂಗೀತ-ನರ್ತನದಿಂದ ಕೂಡಿದ "ಕಬೂಕಿ" ಎಂಬ ನಾಟಕವನ್ನು ಕಂಡುಹಿಡಿದಳು. (The word Kabuki is formed by the three Chinese idea graphs which literelly mean 'singing and dancing



ನಾಟಕದಲ್ಲಿ ಪಾತ್ರಧಾರಿಯು ಮುಖಕ್ಕೆ ಪವಾಡಗಳನ್ನು
ಕಟ್ಟಿಕೊಳ್ಳುವ ರೀತಿಯು.



ರೇಶಿಮೆಯ ಕಟ್ಟುಗಳನ್ನು ಕಟ್ಟುತ್ತಿರುವುದು.

art' and this appellation well indicates the characteristics of this classical stage art). ಅದನ್ನು ನದಿಯ ದಂಡೆಯ ಮೇಲೆ ಕಟ್ಟಿದ ರಂಗಭೂಮಿಯ ಮೇಲೆ ಆಡಲು ಪ್ರಾರಂಭಿಸಿದಳು. ಸಾಮಾನ್ಯ ಜನರು ಈ ನಾಟಕವನ್ನು ಹೆಚ್ಚು ಆದರ ದಿಂದ ಬರಮಾಡಿಕೊಂಡರು. ಓಕುನಿಯೂ ಈ ಬೆಂಬಲದಿಂದ ಪ್ರೋತ್ಸಾಹಿತಳಾಗಿ ತನ್ನ ಆಟಗಳನ್ನು ಸುಶಿಕ್ಷಿತ ಜನರು ಮೆಚ್ಚುವಂತೆ ಮಾಡಿದಳು. ನಟ-ನಟಿಯರ ನೈಪುಣ್ಯವು ಬೆಳೆಯಿತು. ನರ್ತಕಿಯರು ಬೆಲೆಯುಳ್ಳ ಉಡುಪು-ತೊಡಪು ಧರಿಸತೊಡಗಿದರು. ಸಂಗೀತವು ಕೊಳಲು, ತಬಲಾಗಳ ಮೇಳನದಿಂದ "ಸಾಮಿಸೀಗ" (ವೀಣಾ) ದೊಂದಿಗೆ ಹಾಡುವಷ್ಟು ಮುಂದುವರಿಯಿತು. ಕಾಲಕ್ಕೆ ತಕ್ಕಂತೆ ನಾಟಕಕಾರರು ಉತ್ತಮ ಕೃತಿಗಳನ್ನು ರಚಿಸಿದರು.

ದೇವದಾಸಿಯರ ಮನೋಹರವಾದ ಪಾತ್ರಗಳಿಂದ ತರುಣರ ನಟ ವರ್ಗದ ತಲೆಯು ಕೆಟ್ಟಿತು. ಕೀಳು-ಮೇಲು ದರ್ಜೆಯವರೆಂಬ ಭೇದ ಭಾವವು ತಲೆದೋರಲು ಕಲಹಕ್ಕಾರಂಭವಾಯಿತು. ವ್ಯಾಜ್ಯಗಳು ಪಾಳೆಯಗಾರರ ವರೆಗೆ ಬರತೊಡಗಿದವು. ಇದರಿಂದ ಹಾನಿಯಾಗುವ ದೆಂದೆನಿಸಿ ೧೬೨೯ರಲ್ಲಿ "ತೋಕುಗಾವ-ತೋಗಸೆಟ"ನು (ಪೇಜ್ವಯು) ರಂಗಭೂಮಿಯ ಮೇಲೆ ಸ್ತ್ರೀಯರು ಪಾತ್ರವಹಿಸದಂತೆ ನಿಷೇಧಿಸಿದನು. ಈ ಕಟ್ಟಳೆಯಿಂದ ಓಕುನಿಯಿಂದ ಪ್ರಾರಂಭವಾದ, ೨೫ ವರುಷಗಳ ವರೆಗೆ ಸಾಗಿಬಂದ "ಕಬೂಕಿ" ನಾಟಕವು ಸ್ತ್ರೀಯರ ಪಾಲಿಗೆ ಎರವಾಯಿತು. ಓಕುನಿಯು ಮಾಡಿದ ರಂಗಭೂಮಿಯ ಕ್ರಾಂತಿಯಿಂದ ಗಂಡಸರೇ ಸ್ತ್ರೀ ಪಾತ್ರಗಳನ್ನು ಧರಿಸಿ "ಕಬೂಕಿ" ನಾಟಕವನ್ನು ಆಡಹತ್ತಿದರು. ಈ ರೀತಿಯ ನಾಟಕಕ್ಕೆ "ಯೊನ್ನಕಥಾ" (ಸ್ತ್ರೀವೇಷ) ವೆಂದು ಹೆಸರು. (It was through this that Unique Charastics of the Kabuki developed). ಕೆಲವು ವರುಷ ಗತಿಸಿದ ಮೇಲೆ ಸ್ತ್ರೀಯರು ಮತ್ತೆ ರಂಗಭೂಮಿಯಲ್ಲಿ ಸುಳಿದರೂ, ಕಬೂಕಿಯಲ್ಲಿ ಗಂಡಸರೇ ಸ್ತ್ರೀಪಾತ್ರ ವಹಿಸುವರು. ೧೬೩೦ರಿಂದ ಈ "ಕಬೂಕಿ' ನಾಟಕ

ವನ್ನು ತರುಣರು ಅಭಿನಯಿಸತೊಡಗಿದರು. ಇದಕ್ಕೂ ಜನರ ಪ್ರೋತ್ಸಾಹನವು ಮಿತಿಮೀರಿ ದೊರೆಯಿತು. ಮತ್ತೆ ಅನಿಷ್ಟವು ತಲೆದೋರಲಾಗಿ, ಸರಕಾರವು ೧೬೫೨ರಲ್ಲಿ ಯುವಕರೂ ಪಾತ್ರವಹಿಸಕೂಡದೆಂದು ಆಜ್ಞೆಯನ್ನು ಮಾಡಿತು. (Only a short time before this, the youth Kabuki become exceedingly demoralsing in its effects. Eventually the government of the day felt that it could be condoned no longer and in June 1652 issued a decree suppressing the youth Kabuki also). ಈ ನಾಟಕದ ಮೇಲೆ ಕಟ್ಟಳೆಯಾಗಿದ್ದರೂ ಸರಕಾರವು ತನ್ನ ಕ್ರೂರ ದೃಷ್ಟಿಯನ್ನು ತೆಗೆಯಲಿಲ್ಲ. ಈ ವಿಷಯದಲ್ಲಿ ಒಬ್ಬ ಗ್ರಂಥಕರ್ತನು ಹೀಗೆ ಬರೆದಿದ್ದಾನೆ:—The authorities treated it like a naughty stage child, kept was over it as if it were criminal and made it the object of petty as well as of major persecutions

ಈ ಬಗ್ಗೆ ತೊಡಕುಗಳು ಏಳದೆ ಬಿಡಲಿಲ್ಲ. ೧೬೫೩ರಿಂದ, ವಯಸ್ಸಾದ ಮುಂಜುಟ್ಟನ್ನು ಬೋಳಿಸಿದ ಗಂಡಸರು (adults) ಮಾತ್ರ ಸ್ತ್ರೀಪಾತ್ರವನ್ನು ವಹಿಸಬೇಕೆಂಬ ಅಪ್ಪಣೆಯಾಯಿತು. ಇಂಥ ನಿರ್ಬಂಧನೆಯಿದ್ದರೂ ಈ ಗಂಡಸರು ಸ್ತ್ರೀಪಾತ್ರಕ್ಕೆ ಅವಶ್ಯವೆನಿಸುವ ಹಾವ-ಭಾವಗಳನ್ನು ಕ್ರಮಬಟ್ಟು ಕಲಿತರು. ಇಷ್ಟೇ ಅಲ್ಲದೆ, ತಮ್ಮ ನಿತ್ಯ ಜೀವನದಲ್ಲಿಯೂ ಕೂಡ ಹೆಂಗುಸರಂತೆ ನಟಿಸುತ್ತಿದ್ದರು. ಇಂದಿಗೆ ಸ್ತ್ರೀಯರು ಬೇಕಾದ ಹಾಗೆ ಕಬೂಕಿ ನಾಟಕದಲ್ಲಿ ಪಾತ್ರವಹಿಸಲು ಯಾವ ಬಂಧನವಿಲ್ಲದಿದ್ದರೂ ಗಂಡಸರಷ್ಟು ನಿಪುಣತೆಯನ್ನು ತೋರಿಸಲು ಅಶಕ್ತರಾಗಿದ್ದಾರೆ. ಇಲ್ಲಿ ಈಗ ಶ್ರೀಮಾನ್ 'ಉಟ್‌ಮೋನ್' ಎಂಬ ೫೨ ವರುಷದ ಮುದುಕನು ಕಬೂಕಿಯಲ್ಲಿ ಸ್ತ್ರೀಪಾತ್ರವನ್ನು ವಹಿಸುತ್ತಿದ್ದಾನೆ. ಅವನ ನೈಜವಾದ ಸ್ತ್ರೀ ನಟನೆಯನ್ನು ಕಂಡು, ಅವನು ಪುರುಷನೆಂದು ಯಾರೂ ಹೇಳಲು ಸಾಧ್ಯವಿಲ್ಲ. ನಮ್ಮ ದೇಶದ 'ಬಾಲಗಂಧರ್ವ'ನಿಗಿಂತ ಒಂದು ತೂಕ ಹೆಚ್ಚಿನವನಿರುತ್ತಾನೆ.

ಕಬೂಕಿಯಲ್ಲದೆ, ಮೇಲ್ತರಗತಿಯವರ ಮನರಂಜನೆಗಾಗಿ ಮುಖ ವಾಡಗಳನ್ನು ಹಾಕಿಕೊಂಡು ಆಡುವ "ನೋ" ಎಂಬ ಆಟವೂ, ಗೊಂಬೆ ಯಾಟವೂ (Puppet show) ಹೆಚ್ಚು ಪ್ರಚಾರಕ್ಕೆ ಬಂದವು. ಈ ಎರಡು ತರಹದ ನಾಟಕಗಳಲ್ಲಿ ಪಾತ್ರಧಾರಿಗಳು ಮಾತನಾಡಬೇಕಿಲ್ಲ. ಎಲ್ಲವನ್ನೂ ಹಿಮ್ಮೇಳದವರೇ ಹಾಡುವರು. ಈಗ ಜಪಾನಿನಲ್ಲಿ ನೋ, ಗೊಂಬೆಯಾಟ, ಆಧುನಿಕ ನಾಟಕಗಳು ಪ್ರಚಾರದಲ್ಲಿದ್ದರೂ ಕಬೂಕಿ ನಾಟಕವೇ ಮಹಾಜನರ ಮನ್ನಣೆಗೆ ಹೆಚ್ಚು ಪಾತ್ರವಾಗಿದೆ.

## ನಾಟಕ, ರಂಗಭೂಮಿಗಳ ಬೆಳೆವಣಿಗೆ

ಈಗ ಪ್ರಚಾರದಲ್ಲಿರುವ ಐದಂಕಗಳ ಆಟವು ೧೬೮೮ರಿಂದ ಸಾಗುತ್ತ ಬಂದಿದೆ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದರಲ್ಲಿ ಕೇವಲ ಚರಿತ್ರಾತ್ಮಕವಾದ ನಾಟಕವು ತೋರಿಸಲಾಗುತ್ತಿದೆ. ಎರಡನೆಯದರಲ್ಲಿ ಸಾಮಾಜಿಕ ನಾಟಕವನ್ನು ಪ್ರದರ್ಶಿಸುವ ಏರ್ಪಾಡಿದೆ. ಈ ನಾಟಕಗಳಲ್ಲಿ ನರ್ತನಕ್ಕಾಗಿಬಂದು ಭಾಗವು ಮೀಸಲಿರಲೇಬೇಕು. ಜಪಾನಿನಲ್ಲಿಯ ರಂಗ ಭೂಮಿಗಳು (Revolving Stage) ತಿರುಗುವಂಥವುಗಳು. ಹೂಗಳ ಹಾದಿಗಳಿಂದ(Hana michi) ನಿರ್ಮಿಸಲ್ಪಟ್ಟಿವೆ. ಈ ತಿರುಗುವ ರಂಗ ಭೂಮಿಯನ್ನು ಪಾಶ್ಚಿಮಾತ್ಯರಗಿಂತ ಮೊದಲಿಗೆ ಕಂಡುಹಿಡಿದವರು ಜಪಾನಿ ಯರು. ಅದರಿಂದ ರಂಗಭೂಮಿಯಲ್ಲಿ ಒಂದು ತೆರದ ಕ್ರಾಂತಿಯುಂಟಾಯಿ ತೆನಬಹುದು. "ಹನಮಾಚಿಯು (Flower way) ರಂಗಭೂಮಿಯಿಂದ ಕೆಳಮುಖವಾಗಿ ಹೊಂದಿಸಿದ ಸಣ್ಣ ದಾರಿಯು. ಪಾತ್ರಧಾರಿಗಳು ತಮ್ಮ ನಟನೆಯನ್ನು ಮುಗಿಸಿ ಮರಳುವಾಗ ಈ ಹೂವಿನ ದಾರಿಯಿಂದಲೇ ಹಾಯ್ದುಹೋಗುವರು. ಇದರಿಂದ ನೋಟಕರು ನಟನಟಿಯರನ್ನು ಕಣ್ತುಂಬ ನೋಡಲವಕಾಶವಾಗಿದೆ. ಕಬೂಕಿ ನಾಟಕಗಳಲ್ಲಿಯೂ ಸಂಭಾಷಣೆಗಳು ಕೃತಕ ರೀತಿಯಲ್ಲಿ ನಡೆಯುವವು. ( The dialogue and monologue are spoken or rather chanted with artificial voice and intonation. The

acting is exaggerated, sometimes even to dancing, and the make-up is highly accentrated). ಸಾಧಾರಣ ವಾಗಿ ನಮ್ಮ ಕನ್ನಡನಾಡಿನ ಬಯಲಾಟಗಳ ಭಾಷೆಯಂತೆಯೇ ಕಬೂಕಿ ನಾಟಕದ ಭಾಷೆಯೆಂದು ಹೇಳಿದರೆ ತಪ್ಪಾಗದು.

ಇಲ್ಲಿಯ ರಂಗಭೂಮಿಯಲ್ಲಿ ನಿರ್ಮಿಸುವ ದೃಶ್ಯಗಳಲ್ಲಿ ಪ್ರಕೃತಿ ಸೌಂದರ್ಯವುಳ್ಳವುಗಳೇ ಹೆಚ್ಚು. ಇಲ್ಲಿಯ ಚಿತ್ರಗಾರರು ಕೇವಲ ಪ್ರಕೃತಿಯ ಆರಾಧಕರು. ಅವರ ಕೃತಿಗಳಿಂದ ಪ್ರೇಕ್ಷಕರು ಕೆಲಹೊತ್ತು ಕಾಡು, ಗುಡ್ಡ, ಬೆಟ್ಟ, ನದಿ, ಸಮುದ್ರ ಮೊದಲಾದ ಸೃಷ್ಟಿಸೌಂದರ್ಯ ಗಳಲ್ಲಿ ತಲ್ಲೀನರಾಗುವರು. ಕಬೂಕಿ ನಾಟಕವು ಮಧ್ಯಾಹ್ನ ೩ ಗಂಟೆಗೆ ಆರಂಭವಾಗಿ, ರಾತ್ರಿ ೧೧ ಗಂಟೆಗೆ ಮುಗಿಯುವದು. ಈ ಹೊತ್ತಿನಲ್ಲಿ ಐದು ತರಹದ ಆಟಗಳು ಪ್ರದರ್ಶಿಸಲ್ಪಡುವವು. ಟಿಕೆಟ್ಟುಗಳ ದರವು ೩ ಎನ್ನುಗಳಿಂದ ೧೫ ಎನ್ನುಗಳ ವರೆಗಿರುವುದು. ಈ ನಾಟಕಗಳನ್ನು ನೋಡಲು ಸ್ತ್ರೀಯರೇ ಹೆಚ್ಚಾಗಿ ಬರುವರು. ಅವರು ಈ ನಾಟಕಗಳನ್ನು ನೋಡಿ, ಬಹಳ ಹೊತ್ತು ಕಣ್ಣೀರು ಸುರಿಸದಿದ್ದರೆ, ನೋಟಕರು ತೃಪ್ತಿ ಹೊಂದಿಲ್ಲೆಂದು ತಿಳಿಯಬೇಕು. ಐದಂಕಿನ ನಾಟಕದಲ್ಲಿ ಒಂದು ಅಂಕಾ ದರೂ ಪೂರ್ಣವಾಗಿ ದುಃಖದ ಸನ್ನಿವೇಶದಿಂದ ಕೂಡಿದ್ದಿರಲೇಬೇಕು. ಕಬೂಕಿ ನಾಟಕದ ಉಡುಪುಗಳು ಜರತಾರಿಯವಿದ್ದು, ಹೆಚ್ಚು ಬೆಲೆ ಯುಳ್ಳವಿರುತ್ತವೆ.

“ತಕರಜುಕ”ವೆಂಬುವದು ಪಾಶ್ಚಿಮಾತ್ಯ ರೀತಿಯ ನಾಟಕವು. ಸ್ತ್ರೀಯರೇ ಎಲ್ಲ ಪಾತ್ರಗಳನ್ನು ಧರಿಸುವರು. ನವನಾಗರಿಕತೆಯು ಬೆಳೆ ದಂತೆ ‘ನೋ’, ‘ಗೊಂಬೆಯಾಟ’ಗಳ ಸದ್ದು ಅಡಗತೊಡಗಿದೆ. ಇಲ್ಲಿ ಸಿನೇಮಾ, ನಾಟಕ ಮೊದಲಾದುವು ರಾತ್ರಿ ೧೦½ ಗಂಟೆಯೊಳಗಾಗಿಯೇ ತಮ್ಮ ಕಾರ್ಯಕ್ರಮಗಳನ್ನು ಮುಗಿಸಬೇಕೆಂಬ ಸರಕಾರದ ಕಟ್ಟಳೆಯು ಉಂಟು. ಎರಡು ತಿಂಗಳ ಹಿಂದೆ ಎಲ್ಲ ಅಂಗಡಿಗಳೂ ೧೦ ಗಂಟೆಗೇ ಮುಚ್ಚಲ್ಪಡಬೇಕೆಂದು ಆಜ್ಞೆಯಾಗಿದೆ. ೭೦ ಲಕ್ಷ ಪ್ರಜೆಗಳುಳ್ಳ

ಟೋಕಿಯೋ ಪಟ್ಟಣವು ರಾತ್ರಿ ೧೨ತ್ತಿ ಗಂಟೆಯ ಮೇಲೆ ಸ್ಮಶಾನದಂತೆ ಭಾಸವಾಗುವುದು. ಪ್ರೇಕ್ಷಕರು ನಾಟಕಗಳಲ್ಲಿ ಯಾವ ತರದ ಅಸಭ್ಯ ವರ್ತನೆಯನ್ನು ಎಂದೂ ಮಾಡಲಾರರು. ನಾಲ್ಕು ಆಣೆ ಟಿಕೆಟ್ಟುಗಳ ಮಹಾಪ್ರಭುಗಳ ಕಾಟವು ಈ ದೇಶದಲ್ಲಿರುವದಿಲ್ಲ. ಟಿಕೆಟ್ಟುಗಳನ್ನು ಕೊಂಡುಕೊಳ್ಳುವಾಗ ಒಬ್ಬರ ಮೇಲೊಬ್ಬರು ಬಿದ್ದು ಗರುಡವಾಹನ, ಶಯನೋತ್ಸವಾದಿಗಳನ್ನು ಮಾಡದೆ, ಇರುವೆಯ ಸಾಲಿನಂತೆ ಸಾಲು ಸಾಲಾಗಿ ನಿಂತು ಟಿಕೆಟ್ಟುಗಳನ್ನು ಪಡೆಯುವರು. ಬೀಡಿ, ಸಿಗಾರೇಟು, ಪಾನಪಟ್ಟಿ ಮೊದಲಾದವುಗಳು ನಾಟಕಗೃಹಗಳಲ್ಲಿ ಸುಳಿದಿರುವದಿಲ್ಲ.

ಮುಖ್ಯವಾಗಿ ಕಳೆದ ೬೦ ವರುಷಗಳಲ್ಲಿ ಜಪಾನಿಯರು ರಾಜಕೀಯ, ಆರ್ಥಿಕ, ಸಾಮಾಜಿಕ ವಿಷಯುಗಳಲ್ಲಿ ಪಾಶ್ಚಿಮಾತ್ಯರಂತೆ ಮುಂದುವರಿಯುತ್ತಿದ್ದರೂ, ತಮ್ಮ ನಾಟಕ ಕಲೆಯನ್ನು ಮರೆಯದೆ, ದುರ್ಲಕ್ಷಿಸದೆ ಪ್ರಗತಿಪರ ಮಾರ್ಗದಲ್ಲಿ ಅದನ್ನು ಪೋಷಿಸುತ್ತ ಬಂದಿದ್ದಾರೆ.

---

ಮೂರನೆಯ ಪ್ರಕರಣ

# ಜಪಾನ್‌ದೇಶದ ಪ್ರಗತಿ ಮತ್ತು ಅದರ ರಹಸ್ಯ



ಜಪಾನು ದೇಶವು ಪಾಳೆಯಗಾರರ ಆಡಳಿತೆಯಿಂದ ಬಿಡುಗಡೆಯಾಗಿ ಇನ್ನೂ ೭೦ ವರುಷಗಳಾಗಿಲ್ಲ. ಇಷ್ಟು ಅಲ್ಪಾವಧಿಯಲ್ಲಿಯೇ ಆರ್ಥಿಕ ಸುಸ್ಥಿತಿಯನ್ನು ಹೊಂದಿ, ಇದು ಕೈಗಾರಿಕೆಗಳ ದೇಶವೆಂದು ಇಡೀ ವಿಶ್ವವೇ ಹೊಗಳುವಷ್ಟು ಮುಂದುವರಿದ ಈ ದೇಶದ ಮಹತ್ವವು ಈಗ ಅಸ್ತಿತ್ವದಲ್ಲಿರುವುದಿಲ್ಲ. ಜಪಾನಿಯರು ೧೮೬೮ರಲ್ಲಿ ತಮ್ಮ ಒಳಜಗಳಗಳಿಗೆ ತಿಲಾಂಜಲಿಯನ್ನು ಕೊಟ್ಟು, ಒಕ್ಕಟ್ಟಿನಿಂದೊಡಗೂಡಿ ಹೊಸ ಸರಕಾರವನ್ನು ಸ್ಥಾಪಿಸಿಕೊಂಡರು. ಅಂದಿನಿಂದ ದೇಶದ ಉನ್ನತಿಯು ಬಹುವಿಧವಾಗಿ, ಭರದಿಂದ ಬೆಳೆಯುತೊಡಗಿತು.

೧೮೬೮ರಲ್ಲಿ ಸರಕಾರವು ಬಿಳಿ ಜನಾಂಗಗಳಿಗೆ ವ್ಯಾಪಾರಮಾಡುವುದಕ್ಕಾಗಿ ಅನೇಕ ಸೌಲಭ್ಯಗಳನ್ನೊದಗಿಸಿತು. "ಪರದೇಶದ ವಸ್ತುಗಳ ಮೇಲೆ ಸುಂಕವನ್ನು ಹೇರಬಾರದು; ಪರದೇಶದ ಜಲಸೈನಿಕರಿಗಾಗಿ ತಕ್ಕ ಸ್ಥಳದ ಏರ್ಪಾಟು ಮಾಡಿಕೊಡಬೇಕು; ವ್ಯಾಪಾರದ ಸಂಬಂಧವಾಗಿ ವ್ಯಾಜ್ಯಗಳುಂಟಾದರೆ ಅವು ಪರಕೀಯ ನ್ಯಾಯಸ್ಥಾನದಲ್ಲಿ ನಿರ್ಣಯವಾಗ

ಬೇಕು; ಯಾವ ಪರಕೀಯನನ್ನು ಯಾವ ರೀತಿಯಿಂದಲೂ ಬಂಧಿಸ ಕೂಡದು" ಎಂದು ಮೊದಲಾದ ಆತ್ಮವಿಘಾತಕದ ಕರಾರುಗಳಿಗೆ ಒಪ್ಪಿಕೊಂಡು ವ್ಯಾಪಾರದ ಬಾಗಿಲನ್ನು ಪರಕೀಯರಿಗಾಗಿ ಶಕ್ತಿಶೂನ್ಯವಾದ ಜಪಾನವು ತೆರೆದುಕೊಟ್ಟಿತು. ಮೇಜಿ ಚಕ್ರವರ್ತಿಗಳು ಇದೆಲ್ಲವನ್ನು ಸಮಾಧಾನದಿಂದ ಸಹಿಸಿಕೊಂಡು, ಬಿಳಿ ಜನಾಂಗದವರ ನಾಗರಿಕತೆಯನ್ನು ಅನುಕರಿಸದೆ ತಮ್ಮ ದೇಶವು ಉದ್ಧಾರವಾಗದೆಂದು ಮನಗಂಡು, ಎಲ್ಲ ಕಟ್ಟುಗಳಿಗೂ ಒಳಗಾದರು. ಪರಕೀಯರಂತೆ ಮುಂದುವರಿಯಲು "ತಮ್ಮ ದೇಶದ ಸಂಪತ್ತು ಬೆಳೆಯಿಸುವುದು; ಭೂ-ಜಲ ಸೈನ್ಯದ ಪ್ರಗತಿಯನ್ನು ಹೆಚ್ಚಿಸುವುದು" ಎಂದು ಬಗೆದು ತಾತ್ಕಾಲಿಕ ಯೋಜನೆಗೆ ಸರಕಾರವು ಕೈಹಾಕಿತು. ಅಂದಿನಿಂದ ಭೂ-ಜಲ ಸೈನ್ಯಗಳು ೧೮೯೨ ಇಸ್ವಿಯೊಳಗಾಗಿ ಬಲವಾದವು. ದೇಶಕ್ಕೆ ಅಪಮಾನಕಾರಕವಾದ ಕರಾರುಗಳನ್ನು ಕಿತ್ತೊಗೆಯದಿದ್ದರೆ ಜಪಾನ ಸರಕಾರವು ಯುದ್ಧವನ್ನು ಹೂಡಲು ಸಿದ್ಧವಿದೆಯೆಂದು ಗುಡುಗು ಹಾಕಿತು. ಬಲಾಢ್ಯ ಜಪಾನದ ಗರ್ಜನೆಗೆ ಬಿಳಿ ಜನಾಂಗಗಳು ಬೆದರಿ, ಮೊದಲು ಮಾಡಿಕೊಂಡ ಕರಾರುಗಳನ್ನು ಬಿಟ್ಟುಕೊಟ್ಟವು. ಅಲ್ಲಿಂದ ಮುಂದೆ, ಜಪಾನ ಸರಕಾರವು ದೇಶದ ಕೈಗಾರಿಕೆಗಳ ಪ್ರಗತಿಯ ಸಲುವಾಗಿ ಪರಕೀಯ ವಸ್ತುಗಳ ಮೇಲೆ ತಮ್ಮ ಮನಸ್ಸಿಗೆ ಬಂದಷ್ಟು ಸುಂಕವನ್ನು ಹೇರುವ ಕಟ್ಟಳೆಯನ್ನು ಮಾಡಿತು. ಕಟ್ಟಳೆ ಮೀರಿದ ಪರಕೀಯನ ವಿಚಾರಣೆ ತಮ್ಮ ನ್ಯಾಯಸ್ಥಾನಗಳಲ್ಲಾಗಬೇಕೆಂದು ಗೊತ್ತುಪಡಿಸಿತು. ಜಪಾನವು ತನ್ನ ವ್ಯಾಪಾರಕ್ಕೆ ತೊಂದರೆಪಡಿಸುವಂಥ ಬಿಳಿ ಜನಾಂಗಗಳ ಸೊಕ್ಕನ್ನು ಕಡಿಮೆ ಮಾಡಿತು. ಭೂ-ಜಲಸೈನ್ಯ, ಕೈಗಾರಿಕೆಗಳ ಪ್ರಗತಿಗಳ ಫಲವಾಗಿ ಜಪಾನ ಸರಕಾರವು ಇಂದಿಗೆ, ಹತ್ತಿಯ ಕೈಗಾರಿಕೆಯಲ್ಲಿ ಗುರುಸ್ಥಾನಾಪನ್ನವಾಗಿದ್ದ ಇಂಗ್ಲಂಡವನ್ನು ತಳ್ಳಿ, ತಾನು ಆರೂಢವಾಗಿರುವುದು. ಜಪಾನವು ಬಣ್ಣದ ಸಾಮಾನು (Dye stuff) ಕೈಗಾರಿಕೆಯಲ್ಲಿ ಮುಂದುವರಿದು, ಈ ಕೈಗಾರಿಕೆಯಲ್ಲಿ ಮುಂದಿದ್ದಂಥ ಜರ್ಮನಿಯನ್ನು ಚಿಂತೆಗೊಳಗಾಗಿಸಿತು. ಕೃತಕ ರೇಶಿಮೆಯ (Rayon industry) ಕೈಗಾರಿಕೆಯಲ್ಲಿ ಪ್ರಥಮಸ್ಥಾನವನ್ನು ಪಡೆದಂಥ ಅಮೇರಿಕೆಯನ್ನು

ಸಹ ಜಪಾನವು ಹಿಂದೆ ನೂಕಿಬಿಟ್ಟಿರುವುದು. ಜಪಾನಿನ ಸೈಕಲ್ಲುಗಳ ಮೇಲೆ ೧೦೦ಕ್ಕೆ ೧೦೦ರಷ್ಟು ಸುಂಕವನ್ನು ಹೇರಿದ್ದರೂ, ಲಕ್ಷಾಂತರ ಸೈಕಲ್ಲುಗಳು ಅಮೇರಿಕಾ, ಯುರೋಪಿನ ರಾಷ್ಟ್ರಗಳಿಗೆ ರವಾನಿಸಲ್ಪಡು ವವು. ಇದರಂತೆಯೇ ಇನ್ನೂ ಅನೇಕಾನೇಕ ಉದ್ಯಮಗಳಲ್ಲಿ ಜಪಾನವು ಮಾಡಿಕೊಂಡ ಪ್ರಗತಿಯು ಪ್ರಶಂಸನೀಯವಾಗಿದೆ. ಪರದೇಶದಿಂದ ಸರಕುಗಳನ್ನು ಹೆಚ್ಚಿಗೆ ತರಿಸದೆ, ತನ್ನಲ್ಲಿಂದ ಸರಕುಗಳನ್ನು ಪರದೇಶಕ್ಕೆ ಕಳಿಸುವ ವ್ಯಾಪಾರಿಯ ಹಿಡಿತದಲ್ಲಿ ಜಪಾನಿನ ಕೈಯನ್ನು ಯಾರೂ ಹಿಡಿಯುವಂತಿಲ್ಲ.

ಈ ದೇಶದ ಇಷ್ಟು ಪ್ರಗತಿಯನ್ನು ಕಂಡು ಅನೇಕ ಪರಕೀಯರು "ಜಪಾನಿನಲ್ಲಿ ಕೂಲಿಯು ಬಹಳ ಕಡಿಮೆ; ಕೂಲಿಕಾರರು ಅರಹೊಟ್ಟೆ ಯಿಂದ ಬಳಲುವರು; ಐಂದ್ರ–ಮಹೇಂದ್ರಜಾಲಗಳಿಂದ ಕೈಗಾರಿಕೆಗಳನ್ನು ಬೆಳೆಸುತ್ತಲಿವ್ದಾರೆ" ಎಂದು ಆಕ್ಷೇಪಿಸಿದ್ದುಂಟು. ಕೈಗಾರಿಕೆಗಳ ಏಳಿಗೆಗೆ ಕೂಲಿಯೊಂದೇ ಕಾರಣವಲ್ಲವೆಂಬ ಮಾತನ್ನು ಲಕ್ಷ್ಯದಲ್ಲಿಡಬೇಕಾ ಗುವುದು. ಹಿಂದುಸ್ತಾನದಲ್ಲಿ ಕೂಲಿಯು ಜಪಾನಿಗಿಂತ ಕಡಿಮೆ ದೊರೆ ಯುವದೆಂದ ಮೇಲೆ ಹಿಂದುಸ್ತಾನದಲ್ಲಿ ಕೈಗಾರಿಕೆಗಳು ಏಕೆ ಬೆಳೆದಿಲ್ಲ ವೆಂದು ಕೇಳಬೇಕಾಗುತ್ತದೆ. ಕೂಲಿಯ ಪ್ರಶ್ನೆಯೇ ಮುಖ್ಯವಾದ ಕಾರಣ ವಿರುವುದಿಲ್ಲ. ಜಪಾನಿನ ಕೈಗಾರಿಕೆಗಳ ಪ್ರಗತಿಯನ್ನು ತಿಳಿದುಕೊಳ್ಳ ಬೇಕಾದರೆ ಕೆಳಗಿನ ಮಾತುಗಳನ್ನು ಗಮನಿಸುವುದು ಅವಶ್ಯವಿದೆ. (೧) ಕೈಗಾರಿಕೆಗಳು ಹುಟ್ಟಿದ ರೀತಿ; (೨) ಸರಕಾರದ ಸಹಾಯ; (೩) ಕಚ್ಚಾ ಮಾಲು (Raw materials) ಎಲ್ಲಿ, ಎಷ್ಟು, ಹೇಗೆ ದೊರೆಯುತ್ತದೆ? (೪) ಬಂಡವಾಳದಾರರು ಹಾಗು ಕೂಲಿಕಾರರು ಸಹಕರಿಸುವ ರೀತಿ (೫) ಹಡಗು ಸಂಸ್ಥೆಗಳ ಬೆಂಬಲ (೬) ಹಣಕಾಸುಗಳ ಸಂಸ್ಥೆಗಳ ಸಹಾಯ. ಇವೇ ಮೊದಲಾದ ವಿಷಯಗಳನ್ನು ತಿಳಿದುಕೊಳ್ಳದೆ ಖಂಡಿಸುವುದು ಅನುಚಿತವಾದುದು. 'ಗುಂಪಿನಲ್ಲಿ ಗೋವಿಂದ' ಎಂಬ ಸಾಮಾನ್ಯ ತತ್ವದ ಮೇಲೆ ಖಂಡಿಸುವುದು ನ್ಯಾಯವೂ ಅಲ್ಲ.

ಜಪಾನ ಸರಕಾರವೇ ಮೊದಲು ಎಲ್ಲ ಕೈಗಾರಿಕೆಗಳನ್ನು ಸ್ಥಾಪಿಸಿ, ಲಾಭದಾಯಕವಾಗುವಂತೆ ಮಾಡಿ, ಅವುಗಳನ್ನು ಪ್ರಜಾಸಂಸ್ಥೆಗಳ

ಆಡಳಿತಕ್ಕೆ ಒಪ್ಪಿಸಿತು. ಯಾಂತ್ರಿಕ ಶಿಕ್ಷಣಕ್ಕೆಂದು ಸಾವಿರಾರು ತರುಣರನ್ನು ಪರದೇಶಕ್ಕೆ ಕಳಿಸಲಾಯಿತು. ಅದರಂತೆ ಇವರು ಪರದೇಶದ ಅನೇಕ ವಿದ್ವಾಂಸರನ್ನು ಕರೆಯಿಸಿಕೊಂಡು ಅವರಿಂದ ವಿಷಯಗಳನ್ನು ಕಲಿತು ನಿಪುಣರಾದರು. ಪರದೇಶಗಳಲ್ಲಿ ಹೊಸ ಹೊಸ ಯಂತ್ರ ನಿರ್ಮಾಣವಾದಂತೆ ಒಂದೊಂದು ತರಹದ ಎರಡೆರಡು ಯಂತ್ರಗಳನ್ನು ತರಿಸಿಕೊಂಡು, ಒಂದರಿಂದ ಕೆಲಸವನ್ನು ಸಾಗಿಸುವರು; ಇನ್ನೊಂದನ್ನು ಬಿಚ್ಚಿ, ಉಚ್ಚಿ, ಪುನಃ ಜೋಡಿಸಿ, ಅದರಂತೆ ಯಂತ್ರಗಳನ್ನು ತಯಾರಿಸಲು ಕಲಿಯುವುದಕ್ಕಾಗಿ ಉಪಯೋಗಮಾಡಿಕೊಳ್ಳುವರು. ಒಂದರಂತೆ ಇನ್ನೊಂದನ್ನು ಮಾಡುವುದರಲ್ಲಿ ಜಪಾನಿಯರು ಮಿಗಿಲಾದವರು. ಮಾನವನ ಪ್ರಗತಿಗೆ ಹೊಸ ಹೊಸ ಶೋಧನೆಗಳನ್ನು ಕಂಡುಹಿಡಿಯುವುದು ಅಗತ್ಯವಿದೆ. ಹಾಗೆ ಸಾಧ್ಯವಾಗದಿದ್ದರೆ ಅನುಕರಣಮಾಡಿಯಾದರೂ ಪ್ರಗತಿಪರ ಮಾರ್ಗವನ್ನು ಅವಲಂಬಿಸುವುದು ಯುಕ್ತವಲ್ಲದೆ ಮತ್ತೇನು? "ಹೊಸದನ್ನು ನಿರ್ಮಿಸುವ ಶಕ್ತಿಯೂ ಇಲ್ಲ, ಅನುಕರಣ ಯುಕ್ತಿಯೂ ಇಲ್ಲವೆಂದ ಮೇಲೆ ಪ್ರಪಂಚದಲ್ಲಿ ಬಾಳುವುದಾದರೂ ಏತಕ್ಕೆ?" ಎಂಬ ಪ್ರಶ್ನೆಗೆ ಏನು ಉತ್ತರವೀಯಬೇಕೆಂಬುವುದು ತಿಳಿಯದಾಗಿದೆ. ಅರೆ ಹೊಟ್ಟೆ ಜೀವನವನ್ನು ತಳ್ಳುವುದು ಬಲು ಕಷ್ಟದ ಮಾತಲ್ಲ. ಆದರೆ ಅದು ಮಾನವ ಜೀವನವಲ್ಲ. ಮಾನವನಿಗೆ ಮಾನವಂತ ಬಾಳನ್ನು ಬದುಕಬೇಕೆಂಬ ಹೆಮ್ಮೆಯು ಇದ್ದುದಾದರೆ ಜಪಾನಿನ ಪ್ರಗತಿಯ ಮಾದರಿಯ ಪಾಠವನ್ನು ತೀಡುವುದು ಪ್ರತಿಯೊಬ್ಬ ಜೀವಿಯ, ದೇಶದ, ಜನಾಂಗಗಳ ಕರ್ತವ್ಯವಾಗಿದೆ.

## ಹತ್ತಿಯ ಕೈಗಾರಿಕೆ

೧. ಜಪಾನಿನ ಎಲ್ಲ ಕೈಗಾರಿಕೆಗಳಲ್ಲಿ ಹತ್ತಿಯ ಕೈಗಾರಿಕೆಯು ಪ್ರಮುಖವಾಗಿದೆ. ಜಪಾನಿನ ಹತ್ತಿ ಬಟ್ಟೆಗಳು ಬಲು ಅಗ್ಗವಾಗಿ ಯಾಕೆ ದೊರೆಯುವವೆಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಅಂದರೆ ಅದರ ರಹಸ್ಯವು ಒಡೆದು ಕಾಣುವುದು.

ಪೂರ್ವದಲ್ಲಿ ಜಪಾನಿಯರಿಗೆ ಹತ್ತಿಯೆಂಬ ಪದಾರ್ಥವೇ ಗೊತ್ತಿರ ಲಿಲ್ಲ. ಕ್ರಿ. ಶ. ೭೯೯ರಲ್ಲಿ ಧರ್ಮನೆಂಬ ಬೌದ್ಧ ಸನ್ಯಾಸಿಯು ಜಪಾನಿಗೆ ಮತಪ್ರಚಾರಕ್ಕೆ ಬಂದನು. ಆಗ ಅವನು ತನ್ನ ಸಂಗಡ ಕೆಲವು ಹತ್ತಿಯ ಬೀಜಗಳನ್ನು ಒಯ್ದಿದ್ದನು. ಅವುಗಳನ್ನು ಅಲ್ಲಿ ಬಿತ್ತಿ, ಬೆಳೆದು ಹತ್ತಿಯ ಉಪಯೋಗವನ್ನು ಏನೂ ಅರಿಯದ ಅವರಿಗೆ ತೋರಿಸಿಕೊಟ್ಟನು. ಇದ ಕ್ಕಿಂತ ಮೊದಲು ಜಪಾನಿನಲ್ಲಿ ರೇಶಿಮೆಯ ಬಟ್ಟೆಯೇ ಪ್ರತಿಯೊಂದಕ್ಕೂ ಉಪಯೋಗಿಸಲ್ಪಡುತ್ತಿದ್ದಿತು. ೧೯ನೇ ಶತಮಾನದ ವರೆಗೆ ಹತ್ತಿಯ ಬಟ್ಟೆಗಳು ಕೈಮಗ್ಗಗಳ ಮೇಲೆ ತಯಾರಾಗುತ್ತಿದ್ದವು. ಈಗಲೂ ಸಹ ಮತ-ಧರ್ಮಗಳ ಪವಿತ್ರ ಸಂದರ್ಭಗಳಲ್ಲಿ ಬೇಕಾಗುವ ಬಟ್ಟೆಯೂ, ಹೆಂಗುಸರು ಧರಿಸುವ ಓಬಿ (ನಡುಕಟ್ಟು) ಗಳೂ ಕೈಮಗ್ಗಗಳಿಂದಲೇ ನೇಯಲ್ಪಡುತ್ತವೆ. ಮಗ್ಗಗಳಿಂದ ತಯಾರಾದ ಬಟ್ಟೆಯು ಸುಂದರ ವಾಗಿಯೂ, ತಾಳಿಕೆಯಲ್ಲಿ ಹೆಚ್ಚು ಬಾಳುವಂತಹದೂ ಇರುವುವರಿಂದ ಗಿರಣಿ ಬಟ್ಟೆಗಳ ಬೆಲೆಗಿಂತ ಹೆಚ್ಚು ಬೆಲೆಯುಳ್ಳದ್ದಾಗಿರುತ್ತದೆ. ಮದು ವೆಯ ಕಾಲಕ್ಕೆ ವಧುವು ಕೈಯಿಂದ ನೇಯ್ದ ಬಟ್ಟೆಗಳನ್ನು ಧರಿಸುವ ರೂಢಿಯೂ ಇಲ್ಲಿರುವುದು.

೧೮೭೮ರಲ್ಲಿ ಸರಕಾರವು ಪರದೇಶಗಳಿಂದ ೨೦೦೦ ಕದುರುಣಿಗೆಯ (Spindles) ಇಪ್ಪತ್ತು ಯಂತ್ರಗಳನ್ನು ತರಿಸಿ, ಬಡ್ಡಿಯಿಲ್ಲದ ಸುಲಭ ವಾದ ಕಂತುಗಳಿಂದ ಅವುಗಳನ್ನು ಸಾರ್ವಜನಿಕ ಸಂಸ್ಥೆಗಳಿಗೆ ಒಪ್ಪಿಸಿತು. ೧೮೯೫ರಲ್ಲಾದ ಚೀನಾ-ಜಪಾನ ಯುದ್ಧದ ವರೆಗೂ ಹತ್ತಿಯ ಸಂಘಗಳು ಹೆಚ್ಚು ಹೆಚ್ಚಾಗಿ ರೂಪುಗೊಂಡವು. ಸರಕಾರವು ಯುದ್ಧದಲ್ಲಿ ದೊರೆತ ಕಪ್ಪುಕಾಣಿಕೆಗಳಿಂದ ಹೊಸ ಹೊಸ ಯಂತ್ರಗಳನ್ನು ತರಿಸಿತು. ಅದರಿಂದ ಹತ್ತಿಯ ಕೈಗಾರಿಕೆಯು ಭರದಿಂದ ಸಾಗಿತು. ೧೮೯೬ರ ಕೊನೆಗೆ, ಒಟ್ಟು ೬೯ ಹತ್ತಿಯ ಕಾರಖಾನೆಗಳಲ್ಲಿ ೧೧,೫೦,೦೦೦ ಕದುರುಣಿಗೆಗಳಿಂದ (Spindles) ಕೆಲಸವು ನಡೆದಿದ್ದಿತು. ಇದಲ್ಲದೆ ೧೯೦೪-೫ರಲ್ಲಿ ನಡೆದ ರಶಿಯಾ-ಜಪಾನ ಯುದ್ಧದಲ್ಲಿ ಜಪಾನಿಯರು ಜಯಶೀಲರಾದುದರಿಂದ ಜನರಲ್ಲಿ ದೇಶಪ್ರೇಮವು ಉಕ್ಕೇರಿತು. ಆ ಪ್ರೇಮವೇ ಕೈಗಾರಿಕೆಯ

ಪ್ರಪಂಚವನ್ನು ಪ್ರವೇಶಿಸಿತು. ಹಣದ ಬೆಂಬಲವು ಹೆಚ್ಚು ದೊರೆತು ಹತ್ತಿಯ ಕಾರಖಾನೆಗಳು ಇನ್ನೂ ಹೆಚ್ಚಾದುವು. ೧೯೧೦ರಲ್ಲಿ ಇಪ್ಪತ್ತು ಲಕ್ಷ ಕದುರುಣಿಗಳು ಕೆಲಸದಲ್ಲಿ ತೊಡಗಿದ್ದರಿಂದ ಇಡೀ ಜಪಾನದೇಶಕ್ಕೆ ಬೇಕಾಗುವಷ್ಟು ಬಟ್ಟೆಯು ತಯಾರಾಗುವ ಸ್ಥಿತಿಯುಂಟಾಯಿತು. ಅಲ್ಲಿಂದ ಮುಂದೆ ಜಪಾನು ಹತ್ತಿಯ ಬಟ್ಟೆಯನ್ನು ಹೊರಗೆ ಕಳಿಸತೊಡಗಿತು. ಇದೇ ಕಾಲಕ್ಕೆ ಇಂಡಿಯಾದಿಂದ ಹೋಗುತ್ತಿದ್ದ ನೂಲಿನ ವ್ಯಾಪಾರವು ನಿಂತಿತು. ೧೯೧೧ರಲ್ಲಿ ಸರಕಾರವು ದೇಶಪ್ರೇಮದ ಹೆಸರಿನಲ್ಲಿ ವಿಧಿಸಿದ ಸುಂಕ (Tariff protection) ದ ಫಲದಿಂದ ಹತ್ತಿಯ ಕೈಗಾರಿಕೆಯು ಮಿತಿಮಿರಿ ಪ್ರಗತಿಯನ್ನು ಪಡೆಯಿತು. ೧೯೧೪ರಲ್ಲಿ ಉಂಟಾದ "ಮಹಾಯುದ್ಧದ" ಸಲುವಾಗಿ ಯುರೋಪದ ರಾಷ್ಟ್ರಗಳು ಹತ್ತಿಬಟ್ಟೆಗಳ ತಯಾರಿಸುವಿಕೆಯನ್ನು ನಿಲ್ಲಿಸಿದುವು. ಅದರಿಂದ ಜಪಾನಿನ ಹತ್ತಿಬಟ್ಟೆಗಳ ಬೇಡಿಕೆಯು ಮಿತಿಮಿರಿ ಬೆಳೆಯಿತು. ಅಂಥ ಬೇಡಿಕೆಯಿದ್ದ ರಾಷ್ಟ್ರಗಳಲ್ಲಿ ಏಶಿಯಾಖಂಡದವುಗಳೇ ಮೊದಲಿನವು. ಅಂದಿನಿಂದ ಇಲ್ಲಿಯವರೆಗೆ ತಮಗೆ ದೊರೆತ ಸ್ಥಾನಗಳನ್ನು ಜಪಾನಿಯರು ಭದ್ರಪಡಿಸಿಕೊಂಡು 'ಗುರುವಿಗೇ ತಿರುಮಂತ್ರ'ವನ್ನು ಹೇಳುತ್ತಲಿರುವರು.

ಮಹಾಯುದ್ಧದ ಮೊದಲು, ಗ್ರೇಟ ಬ್ರಿಟನ್ನವು ವರುಷಕ್ಕೆ ಏಳು ನೂರು ಕೋಟಿ ಗಜ ಬಟ್ಟೆಯನ್ನು, ೫,೨೭,೦೦೦ ಬೇಲು ಹತ್ತಿಯ ನೂಲನ್ನು ಹೊರಗೆ ಕಳಿಸುತ್ತಿತ್ತು. ಯುದ್ಧದ ಮೊದಲು, ಜಪಾನವು ಸಹ ವರುಷಕ್ಕೆ ಮೂವತ್ತು ಕೋಟಿ ಗಜ ಬಟ್ಟೆಯನ್ನು, ೬೮,೦೦೦ ಬೇಲು ಹತ್ತಿಯ ನೂಲನ್ನು ಹೊರಗೆ ಕಳಿಸುತ್ತಿತ್ತು. ಆದರೆ ಅದೇ ಜಪಾನವು ಯುದ್ಧದ ಸುಸಂಧಿಯು ದೊರೆತದ್ದರಿಂದ ೧೯೧೮ರ ವೇಳೆಗೆ ಎಂಬತ್ತುಕೋಟಿ ಗಜ ಬಟ್ಟೆಗಳನ್ನು ರವಾನಿಸುವ ಸುಸ್ಥಿತಿಯನ್ನು ಪಡೆದಿತ್ತು. ಅಲ್ಲಿಂದ ಇಲ್ಲಿಯ ವರೆಗೆ ಇವರ ಕೈಗಾರಿಕೆಯು ಕ್ರಮೇಣ ಬೆಳೆದು ಇಂಗ್ಲಂಡವನ್ನು ಮೂಲೆಗೊತ್ತಿ, ಮಣ್ಣು ತಿನ್ನಿಸಲಾರಂಭಿಸಿತು. ಜಪಾನಿಯರ ಬಟ್ಟೆಯ ಮೇಲೆ ವಿದೇಶಿಯರು ಬೇಕಾದಷ್ಟು ಸುಂಕ

ಹೇರಿದ್ದರೂ, ಎಲ್ಲಿ ನೋಡಿದರೂ ಅಲ್ಲಿ ಜಪಾನಿಯ ಬಟ್ಟೆಯು ಮೆರೆಯುತ್ತ ಲಿದೆ. ಇವರ ಬಟ್ಟೆಯ ಮೇಲೆ ಸುಂಕದ ಭಾರವೊಂದಿಷ್ಟು ಕಡಿಮೆ ಯಾಗಿದ್ದರೆ, ಇಂಗ್ಲಂಡಿನ ಹತ್ತಿಯ ಕಾರಖಾನೆಗಳ ಕೂಲಿಕಾರರು ಕಬ್ಬಿಣ-ಕಲ್ಲಿದ್ದಲಿಗಳನ್ನು ತಿನ್ನಬೇಕಾದ ಪ್ರಸಂಗವು ಒದಗಬಹುದಿತ್ತೆಂದು ಕಲ್ಪಿಸಿದರೆ ಅತಿಶಯೋಕ್ತಿಯಾಗಲಾರದು. ಈ ಕೈಗಾರಿಕೆಯಲ್ಲಿ ಇಂಗ್ಲಂಡ್, ಜಪಾನುಗಳು ಯಾವ ರೀತಿಯಲ್ಲಿ ಮುಂದುವರಿದಿವೆಯೆಂಬ ದನ್ನು ಕೆಳಗಿನ ಅಂಕಿಗಳಿಂದ ಕಾಣಬಹುದು.

## ಹತ್ತಿಬಟ್ಟೆಯ ವ್ಯಾಪಾರ

| | ಜಪಾನು | | ಗ್ರೇಟ ಬ್ರಿಟನ್ | |
|---|---|---|---|---|
| ವರುಷ | ದಶಲಕ್ಷದಲ್ಲಿ ಯಾರ್ಡುಗಳು | ನೂರಕ್ಕೆ | ದಶಲಕ್ಷದಲ್ಲಿ ಯಾರ್ಡು. | ನೂರಕ್ಕೆ |
| ೧೯೩೨ | ೨೦೩೨ | ೩೬% | ೨೧೯೮ | ೩೯% |
| ೧೯೩೩ | ೨೦೯೦ | ೩೯% | ೨೦೩೧ | ೩೮% |
| ೧೯೩೪ | ೨೫೬೮ | ೪೬% | ೧೯೯೩ | ೩೪% |
| ೧೯೩೫ | ೨೭೨೯ | ೪೨% | ೧೯೪೯ | ೩೪% |

ಜಪಾನಿನಲ್ಲಿ ಹತ್ತಿಯು ಬೆಳೆಯದಿರುವದರಿಂದ ತನ್ನ ಕೈಗಾರಿಕೆಗೆ ಬೇಕಾದ ಹತ್ತಿಯನ್ನು ಪರದೇಶಗಳಿಂದ ತರಿಸಿಕೊಳ್ಳದ ಹೊರತು ಜಪಾನಿಗೆ ಬೇರೆ ಮಾರ್ಗವಿಲ್ಲ. ಜಪಾನವು ತನಗೆ ಬೇಕಾಗಿರುವ ಹತ್ತಿಯನ್ನು ಅಮೇರಿಕಾ ಹಾಗು ಹಿಂದುಸ್ಥಾನದಿಂದ ತರಿಸಿಕೊಳ್ಳುತ್ತಲಿದೆ. ಹಿಂದುಸ್ಥಾನದ ಹತ್ತಿಯ ಹಿರಿಯ ಗಿರಾಕಿಯೆಂದರೆ ಜಪಾನು; ಜಪಾನಿನ ಹತ್ತಿ ಬಟ್ಟೆಯ ಹಿರಿಯ ಗಿರಾಕಿಯೆಂದರೆ ಹಿಂದುಸ್ಥಾನವಾಗಿರುವದು. ಜಪಾನ ದೇಶವು ಕಳೆದ ಕೆಲ ವರುಷಗಳಿಂದ ಎಷ್ಟು ಹತ್ತಿಯನ್ನು ತರಿಸಿಕೊಳ್ಳುತ್ತಿದೆಯೆಂಬುದನ್ನು ಕೆಳಗಿನ ಅಂಕಿಗಳು ತೋರಿಸುತ್ತವೆ.

## ಹೊರಗಿನಿಂದ ಬರುವ ಹತ್ತಿಯು (Raw cotton imports)

ಯಾರ್ಡುಗಳು

| ದೇಶಗಳು | ೧೯೩೪ ಪರಿಮಾಣ | ೧೯೩೪ ಬೆಲೆ | ೧೯೩೫ ಪರಿಮಾಣ | ೧೯೩೫ ಬೆಲೆ | ೧೯೩೬ ಪರಿಮಾಣ | ೧೯೩೬ ಬೆಲೆ |
|---|---|---|---|---|---|---|
| ಸಂಯುಕ್ತ ಅಮೇರಿಕಾ | ೬೪[illegible]೬೭೯೧ | ೪೦೦೯೧೯ | ೫೭೫೮೪೩೦ | ೩೭೧೯೫೭ | ೫೯೨೮೭೪೬ | ೩೭೨೪೧೫ |
| ಹಿಂದುಸ್ಥಾನ | ೫[illegible]೯೨೩೮೧ | ೨೪೮೪೩೫ | ೫೨೧೧೦೩೯ | ೨೫೯೦೩೬ | ೬[illegible]೧೬೯೪೪ | ೩೧೫೦೬೧ |
| ಈಜಿಪ್ತ | ೫೪೯೫೫೧ | ೩೯೬೮೬ | ೫೩೬೯೧೩ | ೪೩೦೦೯ | ೪೬೩೯೪೪ | ೩೬೭೭೮ |
| ಚೀನಾ | ೩೩೦೬೪೪ | ೧೫೬೯೩ | ೪೨೭೪೧೦ | ೨೦೭೦೫ | ೪೪೫[illegible]೬೩ | ೨೨೪೧೫ |
| ಇತರ ದೇಶ | ೩೯೫೫೪೩ | ೨೨೫೯೦ | ೩೪೯೯೮೩ | ೧೯೫೫೫ | ೧೬೪೬೦[illegible]೧ | ೧೦೩೭೮೨ |
| ಒಟ್ಟು | ೧೩೫೫೪೮೫೨ | ೭೬೧೪೨೪ | ೧೨೨೮೩೭೩೯ | ೭೧೪೨೬೨ | ೧೫೭[illegible]೧೧೬೮ | ೮೫೦೪೫೨ |

ಹಿಂದುಸ್ಥಾನದಲ್ಲಿ ಗ್ರೇಟ ಬ್ರಿಟನ್‌ರ ಹತ್ತಿಯ ವ್ಯಾಪಾರವು ಮುಗ್ಗಿ, ಜಪಾನಿಯರ ಪಾಲಾಗಿರುತ್ತದೆ. ೧೯೨೮ ರಲ್ಲಿ ಭಾರತಕ್ಕೆ ಬರುತ್ತಿದ್ದ ಜಪಾನಿಯರ ೩೫೦ ದಶಲಕ್ಷ ಚೌರಸ ಗಜ ಬಟ್ಟೆಯು ೧೯೩೨ ರ ವೇಳೆಗೆ ೬೫೦ ದಶ ಲಕ್ಷ ಚದರ ಗಜವು ಬರಲಾರಂಭಿಸಿತು. ಅದೇ ಗ್ರೇಟಬ್ರಿಟನ್‌ದಿಂದ ೧೯೨೯ರಲ್ಲಿ ಭಾರತಕ್ಕೆ ಬರುತ್ತಿದ್ದ ೧೬೦೦ ದಶಲಕ್ಷ ಚದರ ಗಜ ಬಟ್ಟೆಯು ೧೯೩೪ ರಲ್ಲಿ ಕೇವಲ ೬೦೦ ದಶ ಲಕ್ಷ ಚದರ ಗಜಗಳಿಗಿಳಿಯಿತು. ಗ್ರೇಟ

ಬ್ರಿಟನ್ನಿನ ಕೀಳು ಸ್ಥಿತಿಗೆ ಜಪಾನದಷ್ಟೇ ಭಾರತವೂ ಕಾರಣವಾಗಿದೆ. ಇತ್ತೀಚೆಗೆ ಭಾರತದಲ್ಲಿ ನಡೆದ ಸ್ವದೇಶೀ ವಸ್ತುಗಳ ಪ್ರಚಾರದಿಂದ ಅನೇಕ ದೇಶೀಯ ಕಾರಖಾನೆಗಳುಂಟಾಗಿ ಬೇಕಾದಷ್ಟು ಬಟ್ಟೆಯು ತಯಾರಾಗುತ್ತಲಿದೆ. ಇದೇ ರೀತಿ ಭಾರತವು ಕೆಲಸ ಸಾಗಿಸಿದರೆ ಪರದೇಶದಿಂದ ಬರುವ ಬಟ್ಟೆಯ ವ್ಯವಹಾರವು ಕಟ್ಟಾಗುವದರಲ್ಲಿ ಸಂದೇಹವಿಲ್ಲ. ಆಫ್ರಿಕಾ ಮೊದಲಾದ ದೇಶಗಳಿಗೆ ನಮ್ಮಲ್ಲಿಂದ ಬಟ್ಟೆಯನ್ನು ಕಳಿಸುವ ಸ್ಥಿತಿಯುಂಟಾಗದಿರದು. ಅಂಥ ದಿನಗಳು ಭಾರತಕ್ಕೆ ಬೇಗ ಬರಲೆಂದು ಹಾರೈಸೋಣ.

ಜಪಾನಿನಲ್ಲಿಯ ಕಾರಖಾನೆಗಳ ಸಂಖ್ಯೆ, ಭಾಂಡವಲು ಮುಂತಾದವುಗಳು ಕೆಳಗೆ ಕೊಟ್ಟಿದ್ದೇವೆ:—

| ವರುಷ | ಭಾಂಡವಲು Paid Cap. | ಕಾಯಂ ನಿಧಿ Reserves | ಗಿರಣಿಗಳು Mills | ಕದುರುಗಳು Ring Spindles | ಮ್ಯೂಲ ಕದುರುಗಳು Mule Spindles | ಡಬಲಿಂಗ ಕದುರುಗಳು Doubling Spindles | ಮಗ್ಗಗಳು Looms |
|---|---|---|---|---|---|---|---|
| ೧೯೧೫ | ೮೬೦೧೨ | ೩೮೬೬೩ | ೧೬೧ | ೨೭೫೪೧೨೪ | ೫೩೩೯೦ | ೩೫೫೩[illegible]೫ | ೩೦೦೬೮ |
| ೧೯೨೫ | ೩೮೨೭೧೫ | ೨೨೩೫೩೧ | ೨೪೩ | ೫೪[illegible]೩೧೯೪ | ೩೪೧೯೦ | ೭೫೯೬೩೨ | ೭೩೩೮೧ |
| ೧೯೩೫ | ೪೪೦೨೫೫ | ೨೭೬೮೯೮ | ೨೭೬ | ೧೦೧೯[illegible]೧೨೪ | ೩೫೩೨೧ | ೮೬೮೩೧೪ | ೮೯೩೨೫ |
| ೧೯೩೬ | ೪೫೫೬೪೦ | ೨೭೮೩೦೭ | ೨೮೫ | ೧೧೯೮೯೦೦ | —— | —— | ೯೮೦೦೦ |

೧೯೩೬ರ ಕೊನೆಗೆ ೨೪೨೦೦ ಕಾರಖಾನೆಗಳಲ್ಲಿ ಹತ್ತಿಯ ಬಟ್ಟೆಯು ತಯಾರಾಗುತ್ತಿತ್ತು. ಮೇಲೆ ಕಾಣಿಸಿದ ಸಂಖ್ಯೆಯಲ್ಲಿ ೩೦ ಜನರಿಗಿಂತಲೂ ಕಡಿಮೆ ಕೂಲಿಕಾರರಿರುವ ೧೪೦೦೦ ಕಾರಖಾನೆಗಳೂ ಕೂಡಿವೆ. ಸಣ್ಣ ಪುಟ್ಟ ಕಾರಖಾನೆಗಳಲ್ಲಿ ಸ್ವಜನರಿಗೆ ಬೇಕಾಗುವ ಬಟ್ಟೆಯು ಸಿದ್ಧವಾಗುವದು. ಜಪಾನಿನಲ್ಲಿ ಕೋಯೋ, ಷೂಜಿ, ದೈನಿಪನ್ ನೀಪಿಜಿನ್, ತಾನೆಷೂಜಿ ಈ ಐದು ದೊಡ್ಡ ಕಾರಖಾನೆಗಳು. ಹೊರಗೆ ಕಳಿಸುವ ಹತ್ತಿಯ ಬಟ್ಟೆಯಲ್ಲಿ ೧೦೦ಕ್ಕೆ ೪೮ರಂತೆ ಭಾಗವಹಿಸುತ್ತವೆ. ಸಣ್ಣ ಪುಟ್ಟ ಕಾರಖಾನೆಗಳೂ ಸಹ ನೂರಕ್ಕೆ ೩೫ ರಂತೆ ಕಳಿಸುತ್ತಿರುತ್ತವೆ. ಜಪಾನಿಯರು ಹತ್ತಿಯ ಬಟ್ಟೆಯನ್ನು ಇಷ್ಟು ಅಗ್ಗವಾಗಿ ಮಾರಲು ಕಾರಣವೇನು? ಅನುಕೂಲತೆಗಳೇನು? ಎಂಬುವದನ್ನು ವಿಚಾರಿಸುವಾ:—

## (೧) ಕೂಲಿಕಾರರು

ಜಪಾನ ದೇಶದಲ್ಲಿರುವ ಒಟ್ಟು ೨೪೦೦೦ ಹತ್ತಿಯ ಕಾರಖಾನೆಗಳಲ್ಲಿ ೧೦ಲಕ್ಷ ಕೂಲಿಕಾರರಿರುವರು. ಪೂರ್ವಕಾಲದಿಂದಲೂ ನೂಲುವ, ನೇಯುವ ಉದ್ಯಮವನ್ನು ಹೆಂಗುಸರೇ ಮಾಡುತ್ತ ಬಂದಂತೆ, ಇಂದಿಗೂ ಅದು ಅವರ ಕೈಯ್ಯಲ್ಲಿಯೇ ಉಳಿದಿದೆ. ೫೦ ವರುಷಗಳ ಕೆಳಗೆ ಕ್ಷತ್ರಿಯರು ತಮ್ಮ ಕಸುಬುಗಳನ್ನು ಕಳೆದುಕೊಂಡಾಗ, ಅವರ ಹೆಂಗುಸರೂ ಸಹ ಗಂಡಸರೊಡನೆ ಹತ್ತಿಯ ಕಾರಖಾನೆಗಳಲ್ಲಿ ದುಡಿಯತೊಡಗಿದರು. ಮೇಲ್ತರಗತಿಯ ಸ್ತ್ರೀಯರು ಈ ರೀತಿ ಕೆಲಸ ಮಾಡುತ್ತಿರುವದನ್ನು ಕಂಡು ಸಾಧಾರಣ ತರಗತಿಯವರಂತೂ ಗಿರಣಿಗಳಿಗೆ ಮುತ್ತಿಗೆ ಹಾಕಿದರು. ಅದರ ಫಲವಾಗಿ ಕಾರಖಾನೆಯ ಕೂಲಿಕಾರರಲ್ಲಿ ೧೦೦ಕ್ಕೆ ೪೦ರಷ್ಟು ಹೆಂಗುಸರಿರುವರು. ಈ ಹೆಂಗುಸರಲ್ಲಿ ೧೦೦ಕ್ಕೆ ೪೦ರಂತೆ ೧೫ರಿಂದ ೨೦ ವರುಷದೊಳಗಿನ ತರುಣಿಯರೇ ಇರುವರು. ಒತ್ತಾಯದ ಶಿಕ್ಷಣದ ಮೂಲಕ ಪ್ರತಿಯೊಬ್ಬಳೂ ವಿದ್ಯಾವತಿಯಿರುವದರಿಂದ ಚತುರ ಕೂಲಿಯವಳಾಗುವಳು. (Skilled labour) ಇಂಗ್ಲಂಡಿನಲ್ಲಿ ಸ್ತ್ರೀ

ಯರು ಚತುರ ಕೂಲಿಯುವರಾಗಲು ಒಂದೆರಡು ವರುಷ ಬೇಕಾಗುವವು. ಆದರೆ ಜಪಾನಿನಲ್ಲಿ ಮೂರು ತಿಂಗಳು ಸಾಕಾಗುವದು. ಬಹುತೇಕವಾಗಿ ಸ್ತ್ರೀ ಕೂಲಿಕಾರರು ಹಳ್ಳಿಯ ರೈತರ ಮಕ್ಕಳು. ಹಳ್ಳಿಯಲ್ಲಿದ್ದರೆ ತಂದೆ ತಾಯಿಗಳಿಗೆ ಭಾರವಾಗುವದೆಂದೆನಿಸಿ ಪಟ್ಟಣಗಳಿಗೆ ಬಂದು ತಮ್ಮ ಹೊಟ್ಟೆಯನ್ನು ಹೊರೆಯುವದಲ್ಲದೆ ಮನೆಗೆ ನೆರವಾಗುತ್ತಾರೆ. ಕಾರಖಾನೆಯಲ್ಲಿ ಸೇರಿದಾಗ ೭೦ ಸೆನ್ ದಿನಗೂಲಿಯು ದೊರೆಯುವದು; ಅಂದರೆ ಭಾರತಕ್ಕಿಂತ ಕಡಿಮೆಯೆಂದರ್ಥವಲ್ಲ. ಸ್ತ್ರೀ ಕೂಲಿಕಾರರ ಹೆಚ್ಚಿನ ಸಂಬಳವೆಂದರೆ ೨ ಎನ್ನುಗಳು; ತೀರ ಕಡಿಮೆಯೆಂದರೆ ೭೫ ಸೆನ್‌ಗಳು. (೧೦೦ ಸೆನ್=ಎನ್, ೧ ಎನ್=೧೩ ಆಣೆ. ಆರು ವರ್ಷಗಳ ಕೆಳಗೆ ೧ ಎನ್ನಿನ ಬೆಲೆಯು ೧-೧೨-೦ ಗಳಾಗಿತ್ತು.) ಜಪಾನಿಯರ ಕೂಲಿಗೂ ಪಾಶ್ಚಿಮಾತ್ಯ ದೇಶಗಳ ಕೂಲಿಗೂ ಅಜಗಜಾಂತರವಿದೆ. ಇಲ್ಲಿಯ ಕಾರಖಾನೆಗಳ ಒಡೆಯರು ಕೂಲಿಕಾರರಿಗೆ ಜೀವವಿಮೆಯನ್ನು ಇಳಿಸಿಕೊಟ್ಟು ಅದರ ಕಂತುಗಳನ್ನು ತಾವೇ ತುಂಬುತ್ತಾರೆ; ಇವರ ಆರೋಗ್ಯದ ಕಡೆಗೂ ಲಕ್ಷ್ಯಕೊಡುತ್ತಾರೆ. ಇಡೀ ದೇಶದಲ್ಲಿರುವ ೮೦೦೦೦ ವಿವಿಧ ಕೈಗಾರಿಕೆಗಳ ಕಾರಖಾನೆಗಳಲ್ಲಿ ೩೫೦೦೦ ಕಾರಖಾನೆಗಳ ಒಡೆಯರು ತಮ್ಮ ತಮ್ಮ ಕೂಲಿಕಾರರಿಗೆ ವಸತಿಗೃಹಗಳನ್ನು (Dormitory) ಕಟ್ಟಿಸಿ, ಪುಕ್ಕಟೆಯಾಗಿರಲು ಕೊಟ್ಟಿರುತ್ತಾರೆ. ಜಪಾನಿನಲ್ಲಿ ಒಂದಿನದ ಮೂರು ಊಟಗಳು ಮೂವತ್ತೇ ಸೆನ್ನುಗಳಿಗೆ ದೊರೆಯುತ್ತವೆ. ಅಡುಗೆಯವರಿಗೆ ಸಂಬಳ ಕೊಡುವದಲ್ಲದೆ ಅವರ ವೆಚ್ಚವನ್ನೆಲ್ಲ ಯಜಮಾನರೇ ನೋಡಿಕೊಳ್ಳುತ್ತಾರೆ. ಹೀಗಾಗಿ ಕೆಲಸದಲ್ಲಿ ತೊಡಗಿದ ತರುಣಿಯರು ಕೇವಲ ೩-೪ ವರುಷಗಳಲ್ಲಿ ಸಾಕಷ್ಟು ಹಣವನ್ನು ಗಳಿಸಿ ಮದುವೆಯ ವೆಚ್ಚಕ್ಕೆಂದು ತೆಗೆದಿಡುತ್ತಾರೆ. ಗಿರಣಿಗಳ ಸಂಪು, ಗಲಾಟೆ ಮೊದಲಾದವುಗಳಲ್ಲಿ ಇವರು ಸೇರಿಕೊಳ್ಳುವದಿಲ್ಲ. ಗಂಡಸರಿಗೆ ಬೇಕಾದಷ್ಟು ಕೆಲಸ ಸಿಗುವವು. ಹೆಂಗುಸರಿಗೆ ಮಾತ್ರ ಹತ್ತಿಯ ಕಾರಖಾನೆ ಬಿಟ್ಟರೆ ಗತಿಯಿಲ್ಲ. ಒಡೆಯ ಮತ್ತು ಕೂಲಿಕಾರರು ಸಾನುಕೂಲರಾಗಿ ಸಾಗುವದರಿಂದ ಯಾವ ತರದ ಗೊಂದಲವೇಳಲವಕಾಶವಿಲ್ಲ. ಕೂಲಿಯವರ ನೆತ್ತರವನ್ನು ಹೀರಿ ಲಾಭದ ಗಂಟನ್ನು ಹೇರಿಕೊಂಡು ಹೋಗು

ವಕಾಶವಿಲ್ಲ. ಕೂಲಿಯವರ ನೆತ್ತರವನ್ನು ಹೀರಿ ಲಾಭದ ಗಂಟನ್ನು ಹೇರಿಕೊಂಡು ಹೋಗುವಂಥ ಪರದೇಶದ ಭಾಂಡವಲದಾರರು ಇಲ್ಲಿರುವ ದಿಲ್ಲ. ಒಂದು ವೇಳೆ ಕಾರಖಾನೆಯು ಹಾನಿಗೀಡಾಗಿದ್ದರೆ ಕೂಲಿಕಾರರು ಕಡಿಮೆ ಕೂಲಿಯ ಮೇಲೆ ದುಡಿದು ಒಡೆಯನಿಗೆ ನೆರವಾಗುವರು. ಲಾಭ ದಾಯಕವಾದ ಮೇಲೆ ಆ ಒಡೆಯನೂ ಕೂಲಿಕಾರರಿಗೆ ಹೆಚ್ಚು ಕೂಲಿಯನ್ನು ಕೊಡುವನು. ಇಲ್ಲಿ ವಾರದಲ್ಲಿ ೫೩ ತಾಸು ದುಡಿಯ ಬೇಕಾಗುವದು. ಹೆಚ್ಚು ಹೊತ್ತು (Over time) ದುಡಿದರೆ ಹೆಚ್ಚು ಗಳಿಸುವರು. ಸ್ತ್ರೀಯರು ರಾತ್ರಿಯಲ್ಲಿ ದುಡಿಯಬಾರದೆಂಬ ಕಟ್ಟಳೆ ಯಿದೆ. ಗರ್ಭಧಾರಣೆ ಮತ್ತು ಹೆರಿಗೆಯ ಕಾಲದಲ್ಲಿ ಹಣದ ಸಹಾ ಯವು ದೊರೆಯುವುದು. ತಿಂಗಳಿಗೆ ಮೂರು ದಿನ ರಜೆ ಸಿಗುವುದು. ಈ ರಜೆಯಲ್ಲಿ ಯಜಮಾನರೆ ಇವರನ್ನು ವಿಹಾರಾರ್ಥವಾಗಿ ಕರೆದುಕೊಂಡು ಹೋಗುತ್ತಾರೆ. ೧೪ ವರುಷಗಳಿಗಿಂತ ಕಡಿಮೆ ವಯಸ್ಸಿನವರು ಕೆಲಸ ದಲ್ಲಿ ತೊಡಗಲು ಸಾಧ್ಯವಿಲ್ಲ. ಆದ್ದರಿಂದ "ಮಕ್ಕಳ ಕೂಲಿತನವು (Child labour)" ಪಾಶ್ಚಿಮಾತ್ಯರ ದೇಶಗಳಲ್ಲಿದ್ದಂತೆ ಜಪಾನಿನಲ್ಲಿರು ವದಿಲ್ಲ. ಜಪಾನಿನ ತರುಣಿಯರು ವಿದ್ಯಾವತಿಯರು, ಕುಶಲರು ಇರುವವ ರಿಂದ ಇಂದು "ತೋಯೋದಾ" ಎಂಬ ೧೬ ಮಗ್ಗಗಳನ್ನು ನಡೆಯಿ ಸುವ ಶಕ್ತಿಯುಳ್ಳವರಾಗಿದ್ದಾರೆ. ಇಂಗ್ಲಂಡಿನಲ್ಲಿ ತರುಣಿಯರು ನಾಲ್ಕು ಮಗ್ಗಗಳಿಗಿಂತ ಹೆಚ್ಚಾಗಿ ನಡೆಯಿಸಬಾರದೆಂಬ ಕಟ್ಟಳೆಯಿದೆ. ಈ 'ತೋಯೋದಾ' ಮಗ್ಗವು ಹಿರಿಮೆಯನ್ನು ಪಡೆದಿರುವದರಿಂದ ಜಪಾನದ ಸ್ತ್ರೀಯರು ಕಷ್ಟವಿಲ್ಲದೆ ನಡೆಯಿಸಿ, ಹತ್ತಿ ಕೈಗಾರಿಕೆಗೆ ಹೆಚ್ಚಿನ ಸಹಾಯ ವನ್ನು ಮಾಡುತ್ತಲಿರುವರು.

## (೨) ಯಂತ್ರಗಳು

ಪಾಶ್ಚಿಮಾತ್ಯರು ಜಪಾನಿಯರ ಯಾಂತ್ರಿಕ ಸಂಶೋಧನೆಗಳನ್ನು ಕಂಡು ಬೆರಗಾಗಿದ್ದಾರೆ. ೪೦ ವರುಷಗಳ ಹಿಂದೆ ಆಂಗ್ಲೆಯರ ಯಂತ್ರಗಳಿಂದ ಜಪಾನಿಯರು ತಮ್ಮ ಹತ್ತಿಯ ಕಾರಖಾನೆಗಳನ್ನು ಸ್ಥಾಪಿಸಿರುವದೇನೋ ನಿಜ; ಆದರೆ ಈಗ ಅವರೇ ಉತ್ತಮ ತರದ ಯಂತ್ರಗಳನ್ನು ನಿರ್ಮಿಸಿ

ಹೆಸರಾಗಿದ್ದಾರೆ. ಈ ರೀತಿಯ ೧೬ ಯಂತ್ರಗಳನ್ನು ಒಬ್ಬಳೇ ಕೂಲಿಯವಳು ನಡೆಯಿಸಲು ಸಾಧ್ಯವಾಗಿದೆ. ಹತ್ತಿಯ ಬಟ್ಟೆಯ ವಿಷಯದಲ್ಲಿ ಲ್ಯಾಂಕ್ಯಾಶಯರವು ಪ್ರಸಿದ್ಧವಾದರೂ, ಅಲ್ಲಿ ಇನ್ನೂ ಹಳೆಯ ಯಂತ್ರಗಳನ್ನೇ ಉಪಯೋಗಿಸುತ್ತಿದ್ದಾರೆ. ಜಪಾನಿನ ಬಹಳಷ್ಟು ಕಾರಖಾನೆಗಳಲ್ಲಿ ಹೊಸ ಯಂತ್ರಗಳನ್ನುಪಯೋಗಿಸುವದರಿಂದ ಹೆಚ್ಚು ಪ್ರಯೋಜನಕಾರಿಯಾಗಿ ಪರಿಣಮಿಸಿರುತ್ತದೆ. ಇವುಗಳ ಉಪಯುಕ್ತತೆಯನ್ನು ಕಂಡು, ಇತ್ತೀಚೆಗೆ ಓಲ್ಡ್ ಹ್ಯಾಮ ಪ್ಲ್ಯಾಟ್ ಕಂಪನಿಯವರು ತೋಯೋದಾ ಕಂಪನಿಯವರಿಂದ ಮಾದರಿಯ ಯಂತ್ರಗಳನ್ನು ತಯಾರಿಸುವದಕ್ಕೆಂದು ಅನುಮತಿಯನ್ನು ಪಡೆದುಕೊಂಡಿದ್ದಾರೆ. ( Platt Bros Ltd. of Oldham bought a Japanese Patent and is building for the British market the efficient machine that bears the inventor's name 'Toyada') ಜಪಾನಿಯರು ಹಾಳಾಗುತ್ತಿದ್ದ ಹತ್ತಿಯಿಂದಲೂ ಸಹ ( waistage) ಕೆಲವು ಯಂತ್ರಗಳ ಸಹಾಯದಿಂದ ಉತ್ತಮ ಬಟ್ಟೆಯನ್ನು ತಯಾರಿಸುತ್ತಿದ್ದಾರೆ. ಇವರ ಉದ್ಯಮದ ರೀತಿಯು, ಜಾಣತನವು, ಉಪಯುಕ್ತತೆಯ ಮಾರ್ಗಗಳು ಬಹು ಶ್ಲಾಘನೀಯವಾಗಿವೆ.

## (೩) ಹಣದ ಭದ್ರತೆ

ಕೈಗಾರಿಕೆಗಳ ಸಂರಕ್ಷಣೆಗೆ, ಬೆಳವಣಿಗೆಗೆ ಬ್ಯಾಂಕುಗಳ ಸಹಾಯವು ಅತ್ಯವಶ್ಯವಾದುದು. ಕಾರಖಾನೆಗಳಿಗೆ ಹಣದ ತೊಂದರೆಯಾದಾಗ, ಬ್ಯಾಂಕುಗಳು ಸಹಾಯವನ್ನಿತ್ತರೆ ಆ ಕಾರಖಾನೆಗಳು ನಿಸ್ಸಂದೇಹವಾಗಿ ಮುಂದುವರಿಯುವವು. ಬ್ಯಾಂಕುಗಳು ಸಾರ್ವಜನಿಕ ಸಂಸ್ಥೆಗಳಾದುದರಿಂದ ತಮ್ಮ ಸ್ಥಿತಿಗೆ ತಕ್ಕಂತೆ ಸಾಲವನ್ನು ಕೊಡಲು ಸಾಧ್ಯವಿರುತ್ತವೆ. ಕಾರಖಾನೆಗಳು ಸ್ವಂತ ಹಣದಿಂದಲೇ ಮುಂದುವರಿಯುವವಲ್ಲದೆ ಸಾಲದ ಹಣದಿಂದ ಅಲ್ಲವೆಂಬ ಮಾತನ್ನು ಲಕ್ಷ್ಯದಲ್ಲಿಡಬೇಕು. ಜಪಾನಿನ ಕಾರಖಾನೆಗಳೆಲ್ಲ ಹೆಚ್ಚಾಗಿ ಸ್ವಂತ ಹಣದಿಂದಲೇ ಸಾಗಿವೆ. ಆದರಿಂದ ಭಾರತದಲ್ಲಿ ಭಾರತೀಯರಿಗಿಂತ

ಕಡಿಮೆ ದರದಿಂದ ಹತ್ತಿಯನ್ನು ಕೊಂಡು, ಭಾರತಕ್ಕೆ ಬಟ್ಟೆಯನ್ನು ಮಾರಿ ಜಪಾನವು ಹೆಚ್ಚಿನ ಲಾಭವನ್ನು ಪಡೆಯುವದು. ರೋಖು ಹಣಕೊಟ್ಟು ಕೊಳ್ಳುವವರಿಗೆ ನೂಲು ಯಾವಾಗಲೂ ಕಡಿಮೆ ದರದಿಂದ ಸಿಗುವುದು. ಅಗ್ಗವಿದ್ದಾಗ ಹೆಚ್ಚು ಮಾಲನ್ನು ಕೊಂಡುಕೊಂಡು ಸಂಗ್ರಹಿಸುವದರಿಂದ ಲಾಭದ ಪ್ರಮಾಣವು ಹೆಚ್ಚಿಗೆ ದೊರೆಯುವದು. ಸ್ವಂತ ಹಣವಿದ್ದ ಬ್ಯಾಂಕುಗಳ ಅನುಕೂಲತೆಯುಳ್ಳ ಜಪಾನಿನ ಕಾರ ಖಾನೆಗಳನ್ನು ಕಂಡು ಇಂಗ್ಲಂಡಿನ ಕಾರಖಾನೆದಾರರು ಕಣ್ಣು ಕಣ್ಣು ಬಿಡುತ್ತಲಿರುವರು. ಇಂಥ ಸ್ಥಿತಿಯುಳ್ಳ ಜಪಾನಿನ ಕಾರಖಾನೆಗಳು ಒಳ್ಳೇ ಲಾಭದಾಯಕವಾಗಿ ಪರಿಣಮಿಸಿ, ಹತ್ತಿಯ ಬಟ್ಟೆಯ ವ್ಯಾಪಾರ ದಲ್ಲಿ ತಮ್ಮ ಮೂಗನ್ನು ಮುಂದೆ ಮಾಡಿಕೊಂಡು ಮೆರೆಯುತ್ತಿರುವವು.

## (೪) ಸರಕಾರದ ಸಹಾಯ

ಪ್ರಾರಂಭದಲ್ಲಿ, ಜಪಾನ ಸರಕಾರದ ಸಹಾಯ ಹೊಂದದ ಯಾವ ಕೈಗಾರಿಕೆಯೂ ಇಡೀ ದೇಶದಲ್ಲಿಯೇ ಇಲ್ಲ. ಹೆಚ್ಚು ಸಹಾಯ ವನ್ನು ಪಡೆದ ಕೈಗಾರಿಕೆಗಳಲ್ಲಿ ಹತ್ತಿಯ ಕೈಗಾರಿಕೆಯು ಒಂದು. ಇಂದಿಗೂ ಸಹ ಜಪಾನ ಸರಕಾರದ ೩೫೦ ಕಾರಖಾನೆಗಳಿರುವವು. ೧೮೭೮ ರಲ್ಲಿ ಸರಕಾರವು ಪರದೇಶದಿಂದ ಯಂತ್ರಗಳನ್ನು ತರಿಸಿ, ತೀರ ಕಡಿಮೆ ಕಂತುಗಳಿಂದ ಅವುಗಳನ್ನು ಸಾರ್ವಜನಿಕರಿಗೆ ಕೊಟ್ಟದ್ದಲ್ಲದೆ ಪರದೇಶದ ಬಟ್ಟೆಯ ಮೇಲೆ ಕರವನ್ನು ಹೇರಿತು. ಜಪಾನಿನಿಂದ ಹೊರಗೆ ಹೋಗುವ ಬಟ್ಟೆಯ ಮೇಲೆ ಯಾವ ತರದ ಸುಂಕವನ್ನು ಹಾಕುವದಿಲ್ಲ. ಆದರೆ ಜೀವನದ ಮಟ್ಟಲನ್ನು (Standard of living) ಹೆಚ್ಚಿಸುವದ ಕ್ಕೆಂದು ಅಲ್ಲಿಯೇ ಉಪಯೋಗಿಸುವ ಬಟ್ಟೆಗಳ ಮೇಲೆ ೧೦೦ ಕ್ಕೆ ೧೦ ರಂತೆ ಕರವನ್ನು ಕಟ್ಟಲಾಗಿದೆ. ಆದರಿಂದ ಜಪಾನಿನಲ್ಲಿ ವಾಸವಾಗಿ ರುವ ಪರದೇಶಿಯರ ಬಟ್ಟೆ-ಬರೆಗಳ ವೆಚ್ಚವು ಹೆಚ್ಚೆನಿಸುವುದು. ಸರ ಕಾರವು ಸುಂಕವನ್ನು ಕಟ್ಟದಿರುವುದರಿಂದ ಇವರ ಬಟ್ಟೆಯು ತೀರ ಅಗ್ಗ ವಾಗಿದೆ. ಹೇಗೆಂದರೆ:- ಒಂದು ಹತ್ತಿಯ ಬಟ್ಟೆಯ ಕಾರಖಾನೆಯ ವಾರ್ಷಿಕ ಉತ್ಪನ್ನದಲ್ಲಿ ೧೦೦ ಕ್ಕೆ ೬೦ ರಂತೆ ಮಾಲು ಹೊರಗೆ ಹೋದರೆ

ಅದಕ್ಕೆ ಸರಕಾರದ ಸುಂಕವಿರುವದಿಲ್ಲ. ಉಳಿದ ೪೦ ರ ಭಾಗವು ಅಲ್ಲಿಯೇ ಮಾರಿದ್ದಾದರೆ ಮಾತ್ರ ೧೦೦ ಕ್ಕೆ ೧೦ ರಂತೆ ಕರವು ವಿಧಿಸಲ್ಪಡುವುದು. ಸರಕಾರದ ಹಡಗಗಳಿರುವದರಿಂದ ಇಲ್ಲಿಯ ವರ್ತಕರಿಗೆ ತಮ್ಮ ಸರಕನ್ನು ಕಡಿಮೆ ದರದಿಂದ ಪರದೇಶಗಳಿಗೆ ಕಳಿಸಲು ಸಾಧ್ಯವಾಗಿದೆ. ಹಾಗೆಯೇ ಹೊರದೇಶದಿಂದ ತರಿಸುವ ಹತ್ತಿಯೂ ಸುಲಭ ವೆಚ್ಚದಲ್ಲಿ ಜಪಾನಕ್ಕೆ ಬಂದು ಬೀಳುವದು. ಮದ್ರಾಸಿನಿಂದ ಬೆಂಗಳೂರಿಗೆ ಸರಕನ್ನು ಕಳಿಸಲು ತಗಲುವಷ್ಟೇ ವೆಚ್ಚವು, ಜಪಾನದಿಂದ ಮದ್ರಾಸಕ್ಕೆ ಬರುವ ಮಾಲಿಗೆ ತಗಲುತ್ತದೆ.ಜಪಾನದ ಪದಾರ್ಥಗಳು ಪರದೇಶಗಳಲ್ಲಿ ಅಗ್ಗವಾಗಿ ಸಿಗಲು ಸ್ವದೇಶದ ಹಡಗಗಳೇ ಮುಖ್ಯವಾದ ಕಾರಣವಾಗಿರುತ್ತವೆ.

## (೫) ವಿದ್ಯುಚ್ಛಕ್ತಿ

ಇಂದಿಗೆ ಜಪಾನಿನಲ್ಲಿ ವಿದ್ಯುಚ್ಛಕ್ತಿಯು ಇನ್ನಾವ ದೇಶಗಳಲ್ಲಿಯೂ ಸಿಗದಷ್ಟು ಅಗ್ಗವಾದ ದರದಿಂದ ದೊರಕುತ್ತದೆ. ಕಂಪನಿಗಳು ಒಂದು ಯೂನಿಟ್ಟಿಗೆ ೧/೮ ಡಿಯಿಂದ ೧/೪ ಡಿಯವರೆಗೆ ಸರಕಾರದವರಿಂದ ವಿದ್ಯುಚ್ಛಕ್ತಿಯನ್ನು ಪಡೆಯುವವು: ಹೆಚ್ಚು ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಪಡೆಯುವವು. ಹೆಚ್ಚು ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಪಯೋಗಿಸುವವರಿಗೆ ಯೂನಿಟ್ಟಿಗೆ ೧ ೧/೪ ಡಿಯ ದರದಿಂದ ದೊರಕುತ್ತದೆ. ಇಷ್ಟು ಸುಲಭದರದಿಂದ ವಿದ್ಯುಚ್ಛಕ್ತಿಯು ದೊರೆಯುವದರಿಂದ ಸಣ್ಣಪುಟ್ಟ ಕೈಗಾರಿಕೆಗಳೂ ಯಂತ್ರಗಳೂ ಸಹ ಈ ಶಕ್ತಿಯಿಂದಲೇ ನಡೆಯುವವು. ಅದರಿಂದ ಹೆಚ್ಚು ಕೆಲಸವಾಗುವದು. ಇತ್ತೀಚೆಗೆ ಸರಕಾರವು ವಿದ್ಯುಚ್ಛಕ್ತಿಯ ಕಾರ್ಯವನ್ನು ಸಾರ್ವಜನಿಕ ಸಂಸ್ಥೆಗಳಿಗೊಪ್ಪಿಸಿ, ಅವುಗಳ ಮುಖಾಂತರವಾಗಿ ಜನರಿಗೆ ಇನ್ನೂ ಹೆಚ್ಚು ಸಹಾಯವಾಗಬೇಕೆಂದು ಯೋಚಿಸುತ್ತಲಿರುವುದು. ವಿದ್ಯುಚ್ಛಕ್ತಿಯ ಆಡಳಿತವು ದೇಶದ ಹಿತಕ್ಕಾಗಿ ಸರಕಾರದವರ ಕೈಯಲ್ಲಿರುವುದೇ ಲೇಸೆಂದು ಸೈನ್ಯಖಾತೆಯವರು ಬಲವಂತ ಪಡಿಸುತ್ತಿದ್ದಾರೆ. ಈ ವಿದ್ಯುಚ್ಛಕ್ತಿಯು ದೇಶದ ಆರ್ಥಿಕ ಸಂಪತ್ತಿಗೆ ಎಷ್ಟು ಪ್ರಯೋಜನಕಾರಿಯಾಗಿರುವದೆಂಬುದನ್ನು ವರ್ಣಿಸುವದು ಅಸಾಧ್ಯವೇ ಸರಿ.

## ೬ ತುರಸಿನ ಸ್ಪರ್ಧೆ ( Keen competition)

ಇಲ್ಲಿಯ ಹತ್ತಿಯ ಕಾರಖಾನೆಗಳು ( ಹಣದ ಕೊರತೆ ಇರದಿದ್ದ ರಿಂದ ) ಅಗ್ಗವಾಗಿ ದೊರೆಯುವ ಎಲ್ಲ ತರದ ಹತ್ತಿಯನ್ನು ಕೊಂಡು ಮಿಶ್ರಣಮಾಡಿ ಬಟ್ಟೆಯನ್ನು ತಯಾರಿಸುತ್ತವೆ. ಇಂದು ಜಗತ್ತಿನಲ್ಲಿ, ಜಪಾನದ ಬಟ್ಟೆಯಿರದ ಯಾವ ಪೇಟೆಯೂ ಇರುವದಿಲ್ಲ. ಇಲ್ಲಿಯ ಕಂಪ ನಿಗಳಿಂದ ಪರದೇಶಗಳಿಗೆ ಕಳುಹಲ್ಪಟ್ಟ ವಿದ್ಯಾವಂತರಾದ ತರುಣರು ಸೂಚಿಸಿದ ಸ್ಥಳಗಳಲ್ಲಿ ವ್ಯಾಪಾರವು ಪ್ರಾರಂಭವಾಗುತ್ತದೆ. ಜಪಾನಿ ಯರ ಕಣ್ಣಿಗೆ ಬೀಳದ ವ್ಯಾಪಾರದ ಮಾರ್ಗಗಳಿಲ್ಲ. ಇವರು ಬಹು ಆಳ ವಾಗಿ ವ್ಯಾಪಾರದ ಗುಟ್ಟುಗಳನ್ನು ಅಭ್ಯಸಿಸಿ, ತಮ್ಮ ವ್ಯಾಪಾರದ ತಳ ಹದಿಯನ್ನು ಹಾಕಿದ್ದಾರೆ. ಮೇಲ್ಕಾಣಿಸಿದ ಕಾರಣದಿಂದಲೇ ಇಲ್ಲಿಯ ೪೯ ವಿಶ್ವವಿದ್ಯಾನಿಲಯಗಳಲ್ಲಿ ಹೆಚ್ಚು ವಿಶ್ವವಿದ್ಯಾನಿಲಯಗಳು ಈ ವಾಣಿಜ್ಯ ವಿದ್ಯಾಭ್ಯಾಸಕ್ಕೆ ಟೊಂಕಕಟ್ಟಿ ನಿಂತಿರುವವು. ವಾಣಿಜ್ಯಪದವೀ ಧರರಲ್ಲಿ ೧೦೦ ಕ್ಕೆ ೮೦ ರಂತೆ ಪರದೇಶದ ವಿವಿಧ ವ್ಯಾಪಾರಗಳಲ್ಲಿ ತೊಡ ಗಿರುವರು. ಪ್ರತಿಯೊಬ್ಬರೂ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿಯೇ ಇರುತ್ತಾರೆ; ರಾಜಸೇವಕರಾಗಿ ಉಳಿಯುವದಿಲ್ಲ. ಎಲ್ಲ ಕೆಲಸಗಳನ್ನು ಒಬ್ಬನೇ ಮಾಡುವದಿಲ್ಲ. ಕಾರ್ಯವನ್ನು ವಿಭಾಗಿಸಿ (Division of labour) ಮಾಡುವ ಕೆಲಸವು ಅಚ್ಚುಮೆಚ್ಚಾಗುವದಲ್ಲದೆ, ಸ್ವಲ್ಪ ವೆಚ್ಚದಿಂದಾಗುತ್ತದೆ. ಯಾರು ಯಾವ ವಿಷಯದಲ್ಲಿ ನಿಷ್ಣಾತ ರಿರುವರೋ ಅಂಥ ವಿಷಯದಲ್ಲಿಯೇ ಮಾತ್ರ ಕೆಲಸವು ದೊರೆಯುತ್ತದೆ. ವಾಣಿಜ್ಯ ಅಭ್ಯಾಸಿಯು ಎಂಥ ಕಾರಖಾನೆಯಲ್ಲಿದ್ದರೂ ತನ್ನ ಜಾಣತನದ ಚಾಣಕ್ಯರೀತಿಗಳಿಂದ ಪರಕೀಯರನ್ನು ಬೆರಗುಮಾಡಿ ಗಿರಾಕಿಗಳನ್ನು ದೊರಕಿಸುವನು. ಈ ಸಂದರ್ಭದಲ್ಲಿ " ಶೆಟ್ಟಿ ಬಿಗಿಯೋ ಅಥವಾ ಸರಕು ಬಿಗಿಯೋ " ಎಂಬ ಗಾದಿಯ ಮಾತು ನೆನಪಾಗುತ್ತದೆ. ಮುಖ್ಯವಾಗಿ ಎಲ್ಲವೂ ಶೆಟ್ಟಿಯ ಕೈಯಲ್ಲಿಯೇ ಉಳಿಯುವದು. ಶೆಟ್ಟಿಯ ನಿಜವಾದ ಅರ್ಥವನ್ನರಿತ ಜಪಾನಿಯರು ಇಂದು ಇಂಥ ಊರ್ಜಿತಾವಸ್ಥೆಗೇರಿರು ವರು.

ಇವರ ಬಟ್ಟೆಯು ಕೀಳಾಗಿರುವದಿಲ್ಲ; ಅತ್ಯುತ್ತಮವಾದ ನೇಯ್ಗೆಯಿರುತ್ತದೆ. ತಾಳಿಕೆಯಲ್ಲಿಯೂ ಗಟ್ಟಿಯಿರುತ್ತವೆ. ಕೆಲವು ಕಾರಖಾನೆಗಳಲ್ಲಿ ಕೇವಲ ನೂಲನ್ನಷ್ಟೇ ತೆಗೆಯುತ್ತಾರೆ; ಮತ್ತೆ ಕೆಲವುಗಳಲ್ಲಿ ನೇಯ್ಗೆಯಷ್ಟೆ ಇರುತ್ತದೆ. ಹೀಗಾಗಿ ಆಯಾ ಕಾರಖಾನೆಗಳು ಆಯಾ ತರದ ಕೆಲಸದಲ್ಲಿ ಹೆಚ್ಚು ಪರಿಣತಿಯನ್ನು ಹೊಂದಿರುವದರಿಂದ ತಯಾರಾಗುವ ಸರಕನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಜನರ ಯೋಗ್ಯತೆಯಂತೆ ಕೆಲಸವು ದೊರೆಯುತ್ತದೆ; ಸಂಬಳ ಸಿಗುತ್ತದೆ. ಬಹುತೇಕವಾಗಿ ಬರೆವಣಿಗೆಯ ಕೆಲಸವೆಲ್ಲವೂ ಸ್ತ್ರೀಯರಿಂದಲೇ ಸಾಗಿಸಲ್ಪಡುತ್ತಿವೆ.

## ೭ ನಾಣ್ಯದ ಬೆಲೆಯ ಇಳಿತವು (Depriciated currency)

ಜಗತ್ತಿನಲ್ಲಿ ೧೯೩೧ ರಿಂದೀಚೆಗುಂಟಾದ ನಾಣ್ಯದ ಬೆಲೆಯ ಇಳಿತವು ಜಪಾನಿನಲ್ಲಿಯೂ ಇಳಿಯಿತು. ಆದುದರಿಂದ ನಿರ್ಯಾತ ವ್ಯಾಪಾರಕ್ಕೆ ಬಹಳೇ ತೊಂದರೆಯುಂಟಾಯಿತು. ೧೯೩೦ ರಲ್ಲಿ ಜಪಾನದೊಳಗೆ ಒಂದು ಗಜ ಬಟ್ಟೆಗೆ ಎಂಟಾಣೆ ಬೀಳುತ್ತಿತ್ತು; ಆದರೆ ಈಗ ಅದೇ ಮೂರಾಣೆಗೆ ಸಿಗುತ್ತದೆ. ಈ ಬೆಲೆಯ ಇಳಿತದಿಂದ ಒಳದೇಶದ ವ್ಯಾಪಾರಕ್ಕೇನೂ ಹಾನಿಯಾಗಲಿಲ್ಲ. ೧೯೩೧ ರ ಮೊದಲು ಒಂದೂವರೆ ರೂಪಾಯಿಗೆ ಒಂದು ಎನ್ನು ಸಿಗುತ್ತಿತ್ತು; ಈಗ ಇಳಿದ ದರದಿಂದ ೧೩ ಆಣೆಗೆ ಒಂದು ಎನ್ನು ದೊರೆಯುತ್ತದೆ. ನಾಣ್ಯದ ಇಳಿದ ಭಾವದಿಂದ ಪರದೇಶಗಳ ಪದಾರ್ಥಗಳನ್ನು ಕೊಂಡುಕೊಳ್ಳಲು ಹಣವು ಹೆಚ್ಚಿಗೆ ಬೇಕಾಗುವುದು; ಆದರಿಂದ ಆಯಾತ ಸರಕುಗಳ ಬೆಲೆಯು ಹೆಚ್ಚಾಗಿರುವದು. ಹೀಗಾಗಿ ದೇಶದ ಬಂಗಾರವು ಹೊರದೇಶಗಳಿಗೆ ಹೊತ್ತು ಹೋಗುತ್ತದೆ.

ಕಳೆದ ೫-೬ ವರುಷಗಳಲ್ಲಿ ಜಪಾನಿನ ಹತ್ತಿಬಟ್ಟೆಯ ನಿರ್ಯಾತವು ಹೆಚ್ಚಾಗಿದೆ. ೧೯೩೧ ರಲ್ಲಿ ೧೪೧೨೦೦೦೦೦೦ ಚದರ ಗಜ ಬಟ್ಟೆಯು ಹೊರಗೆ ಹೋಯಿತು. ಆದರೆ ಅದೇ ನಿರ್ಯಾತವು ೧೯೩೫ರಲ್ಲಿ ೨೭೨೫೦೦೦೦೦೦ ಚದರ ಗಜ ಬಟ್ಟೆಗೆ ಬಂದಿತು. ಇದೇ ವರುಷ ಗ್ರೇಟ

ಬ್ರಿಟನ್ನವು ೧೯೫೯೦೦೦೦೦೦ ಚದರ ಗಜ ಬಟ್ಟೆಯನ್ನು ನಿರ್ಯಾತಗೊಳಿಸಿತು. ಇಂದು ಲ್ಯಾಂಕ್ಯಾಶಾಯರಿನ ಹತ್ತಿಯ ಕೇಂದ್ರವು ಮುಗ್ಗಿತು. ಒಸಾಕಾದ ಕೇಂದ್ರವು ಬೆಳೆಯಿತು. ೧೯೩೬ ರಲ್ಲಿ ಹತ್ತಿ ಬಟ್ಟೆಯ ನಿರ್ಯಾತದ ಬೆಲೆಯು ೨೬೪೧೪೮೮೦೦೦ ಎನ್ನುಗಳನ್ನು ಮುಟ್ಟಿತು. ಅಂದರೆ ೧೯೩೫ ರಗಿಂತ ನೂರಕ್ಕೆ ೭. ೩ ರಂತೆ ಹೆಚ್ಚಾಯಿತು.

ಈಗ ಜಪಾನವು ಜಗತ್ತಿನಲ್ಲಿ ೧೩೦ ವ್ಯಾಪಾರ ಸ್ಥಳಗಳಿಗೆ ( Markets ) ಬಟ್ಟೆಯನ್ನು ರವಾನಿಸುತ್ತದೆ. ಇವುಗಳಲ್ಲಿ ೮೦ ಸ್ಥಳಗಳು ಮಾತ್ರ ಜಪಾನಿನ ಬಟ್ಟೆಯ ಮೇಲೆ ಕರವನ್ನು ಹೆಚ್ಚಿಗೆ ಹೇರಿವೆ; ಉಳಿದ ೫೦ ಸ್ಥಳಗಳಲ್ಲಿ ಸುಂಕವಿಲ್ಲದೆಯಿದ್ದರೂ ಹೆಚ್ಚು ವ್ಯಾಪಾರವಾಗುವದಿಲ್ಲ. ಚೀನಾದೇಶವೇ ಜಪಾನಿಯರ ಹತ್ತಿಯ ಬಟ್ಟೆಯ ನಿರ್ಯಾತಕ್ಕೆ ತವರುಮನೆಯಾಗಿದೆ. ಒಮ್ಮೆ ಚೀನಾದೇಶವು ವ್ಯಾಪಾರಕ್ಕೆ ಬಲಿಬಿದ್ದರೆ ಹತ್ತಾರು ವರುಷ ವ್ಯವಹಾರವು ಸಲೀಸಾಗಿ ಸಾಗುವುದರಲ್ಲಿ ಸಂದೇಹ ವಿಲ್ಲ.

## ೧೯೩೨ರಿಂದ ಹತ್ತಿ ನೂಲಿನ ಹುಟ್ಟುವಳಿ, ವೆಚ್ಚ, ಆಯಾತ, ನಿರ್ಯಾತ (ಬೇಲುಗಟ್ಟಲೆ).

| Year | Domestic output | Imports | Exports | Exported as cotton issues | Domestic conscumption |
|---|---|---|---|---|---|
| ೧೯೩೨ | ೨೮೧೦೪೩೭೦ | ೨೮೫೮೬ | ೮೯೬೦೪ | ೧೪೩೮೫೪೦ | ೧೩೦೧೮೭೭ |
| ೧೯೩೩ | ೩೦೯೯೮೫೬೦ | ೫೮೯೬೬ | ೪೮೩೦೭ | ೧೪೯೧೬೫೬ | ೧೬೨೨೯೯೪ |
| ೧೯೩೪ | ೩೪೬೨೪೪೨೫ | ೫೪೫೧೭ | ೬೪೮೪೪ | ೧೮೬೬೫೪೨ | ೧೫೮೫೭೯೯ |
| ೧೯೩೫ | ೩೫೫೦೫೧೦ | ೧೭೫೧೪ | ೮೫೫೮೩ | ೧೯೪೦೪೦೦ | ೧೫೯೪೪೦೫ |
| ೧೯೩೬ | ೩೬೦೭೧೯೬೦ | ೧೪೧೧೯ | ೧೧೦೮೩೩ | ೧೯೨೧೯೨೦ | ೧೫೯೧೧೬೫ |

## Percentage of Exports of cotton sexiles according to destinations.

| ಒಟ್ಟು ಹೊರದೇಶಗಳಿಗೆ ಹೋಗುವ ಮಾಲು | ೧೯೨೮ | ೧೯೩೧ | ೧೯೩೩ | ೧೯೩೫ |
|---|---|---|---|---|
| (೧೦೦೦ ಚೌ.ಯಾ.) | ೧೪೧೮೪೩೫ | ೧೪೧೨೦೭೧ | ೨೦೮೮೩೮೩ | ೨೭೧೫೯೮೦ |
| ಬ್ರಿಟಿಶ್ ಇಂಡಿಯಾ | ೨೫.೧೭ | ೨೮.೬೧ | ೨೧.೬೦ | ೨೦.೫೫ |
| ಡಚ್ ಈಸ್ಟ ಇಂಡಿಯಾ | ೧೨.೨೨ | ೧೫.೦೫ | ೨೦.೨೩ | ೧೩.೬೨ |
| ಆಫ್ರಿಕಾ | ೭.೫೭ | ೧೫.೯೪ | ೨೦.೨೬ | ೧೭.೫೧ |
| ಮಂಚುಕೊ | ೧೫.೧೩ | ೪.೧೭ | ೮.೫೨ | ೮.೧೮ |
| ದಕ್ಷಿಣ ಅಮೇರಿಕಾ | ೧.೧೭ | ೧.೧೭ | ೨.೭೫ | ೭.೨೯ |
| ಆಸ್ಟ್ರೇಲಿಯಾ | ೦.೭೩ | ೧.೫೩ | ೨.೭೪ | ೩.೭೪ |
| ಫಿಲಿಫೈನ್ಸ್ | ೨.೧೮ | ೨.೩೮ | ೧.೬೭ | ೩.೨೦ |
| ಸಿಯಾಮು | ೦.೪೫ | ೦.೪೧ | ೧.೯೦ | ೨.೬೦ |
| ಚೀನ | ೨೬.೧೬ | ೧೫.೪೬ | ೫.೪೨ | ೨.೦೬ |
| ಹಾಂಗ್-ಕಾಂಗ್ | ೪.೮೯ | ೪.೪೮ | ೧.೩೭ | ೧.೮೨ |
| ಸ್ಟ್ರೇಟ ಸೆಟಲಮೆಂಟಗಳು | ೧.೦೮ | ೨.೯೩ | ೪.೬೩ | ೧.೬೨ |
| ಉಳಿದವು | ೩.೨೫ | ೭.೮೯ | ೮.೯೩ | ೧೮.೩೧ |

## ಕೃತಕ ರೇಶಿಮೆಯ ಕೈಗಾರಿಕೆ

ಜಪಾನಿನಲ್ಲಿ ಮೊಟ್ಟಮೊದಲು ೧೯೧೬ರಲ್ಲಿ ಕೃತಕ ರೇಶಿಮೆಯ ಕಾರಖಾನೆಯು ಸ್ಥಾಪಿಸಲ್ಪಟ್ಟಿತು. ೧೯೧೮ರಲ್ಲಿ ಇದರ ಹುಟ್ಟುವಳಿಯು ೯೦೦೦೦೦೦ ಪೌಂಡುಗಳಾಗಿತ್ತು; ಆದರೆ ಅದೇ ೧೯೩೬ನೇ ಇಸ್ವಿಯಲ್ಲಿ ೨೭೬೫೦೫೧೦೦ ಪೌಂಡುಗಳಾಯಿತು. ಈ ಕೈಗಾರಿಕೆಯಲ್ಲಿ ಅಮೇರಿಕವೊಂದನ್ನು ಬಿಟ್ಟರೆ, ಜಪಾನವೇ ನಂಬರಿನದಾಗಿದೆ. ಗ್ರೇಟಬ್ರಿಟನ್ ಹಾಗು ಜರ್ಮನಿ ದೇಶಗಳಲ್ಲಿಯ ಈ ಕೃತಕರೇಶಿಮೆಯ ಹುಟ್ಟುವಳಿಗಿಂತ ಜಪಾನಿನಲ್ಲಿ ೧೦೦ಕ್ಕೆ ೫೦ರಂತೆ ಹೆಚ್ಚು ಉತ್ಪನ್ನವಾಗುತ್ತದೆ.

೧೯೨೫ರಲ್ಲಿ ೯೫ ಲಕ್ಷ ಎನ್ನುಗಳ ಭಾಂಡವಲದಿಂದ ಈ ಉದ್ಯಮದ ೫ ದೊಡ್ಡ ಕಾರಖಾನೆಗಳು ಸ್ಥಾಪಿಸಲ್ಪಟ್ಟವು. ಮುಂದೆ ೧೯೩೪ರಲ್ಲಿ



ಆಟೋಮೇಟಿಕ್ (Automatic) ರೇಶಿಮೆಯ ಯಂತ್ರಗಳು. ಹತ್ತು ಹನ್ನೆರಡು ಯಂತ್ರ ಪರಿಶ್ರಮವಿಲ್ಲದೆ ೧೬ರಿಂದ ೧೮ ವರ್ಷದ ತರುಣಿಯರು ನಡೆಸುತ್ತಾರೆ.



ರೇಶಿಮೆಯನ್ನು ತಯಾರಿಸುತ್ತಿರುವುದು.



ಟೋಕಿಯೋ ಸ್ಟೇಶನ್.

೧೭ ಕಾರಖಾನೆಗಳಾದವು. ಭಾಂಡವಲವು ೨೬ ಕೋಟಿ ಎನ್ನುಗಳನ್ನು ಮುಟ್ಟಿತು. ಈ ಕಾರಖಾನೆಗಳಲ್ಲಿ ಕೆಲಸ ಮಾಡುವವರ ಸಂಖ್ಯೆಯು ೧೯೨೩ರಲ್ಲಿ ೬೬೫೩ ಇತ್ತು. ೧೯೩೩ರಲ್ಲಿ ೩೩೦೨೦ ಸಂಖ್ಯೆಗೆ ಮುಟ್ಟಿತು. ತೀರ ಸಣ್ಣ ಕಾರಖಾನೆಗಳಲ್ಲಿಯ ಕೂಲಿಯುವರನ್ನು ಸಹ ಹಿಡಿದರೆ ಏನಿಲ್ಲೆಂದರೂ ಒಂದು ಲಕ್ಷ ಜನರು ಈ ಕೈಗಾರಿಕೆಯಿಂದ ಹೊಟ್ಟೆತುಂಬಿ ಕೊಳ್ಳುತ್ತಾರೆ.

೨೦೦೦ ಕೂಲಿಯುವರಿಗಿಂತ ಹೆಚ್ಚಿಗಿರುವ ಕಾರಖಾನೆಗಳಲ್ಲಿ ಹೊಸ ತರದ ಯಂತ್ರಗಳಿಂದ ಕೆಲಸವು ನಡೆಯುತ್ತಿದೆ. ಅದರಿಂದ ನಯವಾದ ಬಟ್ಟೆಯು ತಯಾರಾಗಿ ಸುಲಭ ಬೆಲೆಗೆ ಮಾರಲು ಶಕ್ಯವಾಗುತ್ತದೆ. ಇಂಥ ದೊಡ್ಡ ಕಾರಖಾನೆಗಳಲ್ಲಿ ೮ ತಾಸಿನ ದುಡಿತವೆಂಬ ಕಟ್ಟಳೆಯಿದೆ. ಸಾಧಾರಣವಾಗಿ ಒಂದು ತಾಸಿಗೆ ೧೩ ಸೆನ್ಸು ಕೂಲಿ ದೊರೆಯುತ್ತದೆ. ಕೈಗಾರಿಕೆಗಳು ಊರ್ಜಿತಾವಸ್ಥೆಯನ್ನು ಪಡೆದಂತೆ ಸರಕನ್ನು ತಯಾರಿಸಲು ವೆಚ್ಚವು ಕಡಿಮೆ ತಗಲುತ್ತದೆ.

ಈಗ ೧೦೦ ಪೌಂಡುಗಳ ಡಿನೇರು (Denier) ತರಹದ ರೇಶಿಮೆ ೬೦ ಎನ್ನುಗಳಿಗೆ ಸಿಗುತ್ತದೆ. ಅಂದರೆ ಅಷ್ಟೇ ತೂಕದ ಹತ್ತಿಯ ನೂಲಿನ ದರಕ್ಕಿಂತ ಕಡಿಮೆ ದೊರೆದಂತಾಗುವುದು. ರೇಶಿಮೆಯ ನೂಲು ಇಷ್ಟು ಅಗ್ಗವಾಗಿ ಸಿಗುವ ಕಾರಣವೇನೆಂದರೆ—ಪರದೇಶಗಳಿಂದ ತರಿಸಿದ ಹತ್ತಿಯಿಂದ ನೂಲನ್ನು ತಯಾರಿಸಲು ಆ ಕೊಂಡ ಬೆಲೆಯ ಮೇಲೆ ೧೦೦ಕ್ಕೆ ೮೦ರಂತೆ ವೆಚ್ಚ ತಗಲುವುದು. ಆದೇ ಈ ಕೃತಕ ರೇಶಿಮೆಯ ನೂಲನ್ನು ತಯಾರಿಸಲು 'ಪಲ್ಪ'ನ್ನು (Pulp) ಕೊಳ್ಳುವ ಬೆಲೆಯ ಮೇಲೆ ೧೦೦ಕ್ಕೆ ೩೦ರಂತೆ ವೆಚ್ಚ ಬೀಳುವುದು. ಸ್ವದೇಶದ ಬಣ್ಣ ಮೊದಲಾದವುಗಳನ್ನೇ (Chemicals, machinery etc.) ಉಪಯೋಗಿಸುವುದರಿಂದ ೧೦೦ಕ್ಕೆ ೧೦ರಂತೆ ವೆಚ್ಚ ತಗಲುವುದರಿಂದ ಉಳಿದ ದೇಶಗಳಿಗಿಂತ ಸುಲಭವಾಗಿ ಮಾರಲು ಸಾಧ್ಯವಾಗಿದೆ.

ನಿಜವಾದ ರೇಶಿಮೆಯ ನೇಯ್ಗೆಯ ಕೈಗಾರಿಕೆಯು ಮುಗ್ಗುತ್ತ ಬಂದಂತೆ ಈ ಕೃತಕ ರೇಶಿಮೆಯು ಆದರ ಸ್ಥಳವನ್ನು ಆಕ್ರಮಿಸಿತು.

ಹಿಂದೆ ನಿಜವಾದ ರೇಶಿಮೆಯ ಪಡಿಮೂಲೆಗಳ ಸ್ಥಳವಾಗಿದ್ದ ಗುಂಮಾ, ಫೂಕುಹಿ, ಇಚಿಕಾ ಪ್ರಾಂತಗಳು ಇಂದು ಕೃತಕ ರೇಶಿಮೆಗೆ ಪ್ರಸಿದ್ಧ ವಾಗಿರುತ್ತವೆ. ಕೃತಕ ರೇಶಿಮೆಯ ಎಳೆಗಳು ಒಂದೇ ಸಮನಾಗಿರುವುದ ರಿಂದ (Uniformity in quality) ನೇಯುವುದಕ್ಕೆ ಸುಲಭವಾಗು ತ್ತದೆ. ಇದರ ಬಟ್ಟೆಯು ಅಗ್ಗವಾಗಿ ದೊರೆಯುವುದರಿಂದ ಗುಣ (quality) ಪರೀಕ್ಷೆಗೆ ಅಷ್ಟೊಂದು ಅವಕಾಶವುಳಿಯುವುದಿಲ್ಲ. ಹಬು ತೇಪಿ (Habutae) ಎಂಬ ನಿಜವಾದ ರೇಶಿಮೆಯ ಬಟ್ಟೆಯನ್ನು ನೇಯು ಲಿಕ್ಕೆ ೬೦ ದಿನಗಳು ಬೇಕಾಗುವವು. ಅದೇ ಕೃತಕ ರೇಶಿಮೆಯಿಂದ ನೇಯಲು ಎರಡೇ ದಿನಗಳು ಸಾಕು. ಮೇಲಿನ ಕಾರಣಗಳಿಂದ ಈ ಕೃತಕ ರೇಶಿಮೆಯ ವ್ಯಾಪಾರವು ಬಹುಮುಖವಾಗಿ ಪಸರಿಸಲು ಅನು ವಾಗಿ ಬಿಟ್ಟಿದೆ.

'ಫೂಕುಹಿ' ಪ್ರಾಂತದಲ್ಲಿ ನಿಜ ರೇಶಿಮೆಯ ಕೈಗಾರಿಕೆಯು ಹಿಂದೆ ಬಿದ್ದು, ಕೃತಕ ರೇಶಿಮೆಯ ವ್ಯವಹಾರವು ಹೇಗೆ ಮುಂದುವರಿಯಿತೆಂಬ ದನ್ನು ಕೆಳಗೆ ಕೊಡಲಾಗಿದೆ.

## ಫೂಕುಹಿ ಪ್ರಾಂತದಲ್ಲಿಯ ರೇಶಿಮೆಯ ಕಾರಖಾನೆಗಳು

(ಆಯಾ ಇಸ್ವಿಗಳಲ್ಲಿ ಕೆಲಸ ಮಾಡುತ್ತಿದ್ದ ನಿಜ ಮತ್ತು ಕೃತಕ ರೇಶಿಮೆಯ ಕಾರಖಾನೆಗಳು)

| ೧೯೨೩ | ೧೯೨೪ | ೧೯೨೬ | ೧೯೨೭ | ೧೯೨೮ | ೧೯೨೯ | ೧೯೩೦ | ೧೯೩೧ | ೧೯೩೨ | ೧೯೩೩ |
|---|---|---|---|---|---|---|---|---|---|
| ೨೯೨ | ೬೧೯ | ೫೯೯ | ೭೨೫ | ೭೭೮ | ೪೮೩ | ೩೪೭ | ೩೧೪ | ೨೮೭ | ೨೬೮ |
| — | — | — | — | — | ೪೭೧ | ೬೨೮ | ೭೩೩ | ೯೬೫ | ೧೦೨೯ |

ಕೃತಕ ರೇಶಿಮೆಯ ಕಾರಖಾನೆಗಳು ನಿಜ ರೇಶಿಮೆಯ ಕಾರಖಾನೆ ಗಳ ಮೂರು ಪಟ್ಟು ಹೆಚ್ಚಾಗಿರುವುದರಿಂದ ಸಹಜವಾಗಿಯೇ ಹುಟ್ಟು ವಳಿಯು ಬೆಳೆದು ತೀರ ಅಗ್ಗವಾಗಿ ದೊರೆಯಲು ಕಾರಣವಾಗಿದೆ.

## ಉತ್ಪತ್ತಿಯ ಪ್ರಮಾಣ (Scale of production)

ಕೃತಕ ರೇಶಿಮೆಯ ಕೈಗಾರಿಕೆಯೂ ಹತ್ತಿಯ ಕೈಗಾರಿಕೆಯಂತೆ ಸಣ್ಣ ಪುಟ್ಟ ಕಾರಖಾನೆಗಳಿಂದಲೇ ನಡೆಯಿಸಲ್ಪಡುತ್ತದೆ. ೫ ರಿಂದ ೯

ಜನರಿರುವ ಕಾರಖಾನೆಗಳೇ ಅರ್ಧಕ್ಕಿಂತ ಹೆಚ್ಚಿಗಿರುವವು. ಒಟ್ಟು ಕಾರಖಾನೆಗಳಲ್ಲಿ ೧೦೦ಕ್ಕೆ ೯೦ರಷ್ಟು ಕಾರಖಾನೆಗಳು ೩೦ ಕೂಲಿಯವರಗಿಂತ ಕಡಿಮೆ ಜನರಿಂದ ನಡೆಸಲ್ಪಡುತ್ತವೆ. ಇಂಥ ಕಾರಖಾನೆಗಳಲ್ಲಿ ಕೃತಕ ರೇಶಿಮೆಯ ಬಟ್ಟೆಯ ಉತ್ಪತ್ತಿಯಲ್ಲಿ ತೊಡಗಿರುವ ಕೂಲಿಕಾರರ ಸಂಖ್ಯೆಯು ೧೦೦ಕ್ಕೆ ೬೦ರಷ್ಟು ಮಾತ್ರ ಇರುತ್ತದೆ.

ಜಪಾನದಲ್ಲಿಯ ಕೃತಕ ರೇಶಿಮೆಯನ್ನು ನೇಯುವ ಕಾರಖಾನೆಗಳು ಕೆಳಗಿನಂತಿವೆ.

| ಕಾರಖಾನೆಗಳಲ್ಲಿರುವ ಕೂಲಿಕಾರರ ಸಂಖ್ಯೆಯಂತೆ. | ೧೯೩೦ | | ೧೯೩೧ | | ೧೯೩೨ | | ೧೯೩೩ | |
|---|---|---|---|---|---|---|---|---|
| ಒಟ್ಟು— | ೧೩೬೦ | ೨೧೪೮೭ | ೧೬೪೭ | ೩೫೧೪೪ | ೨೦೧೪ | ೩೨೫೭೪ | ೨೩೮೧ | ೪೨೭೫೩ |
| ೫– ೯ | ೭೧೯ | ೪೬೯೫ | ೮೮೫ | ೫೬೦೩ | ೧೦೬೦ | ೬೮೩೨ | ೧೨೪೩ | ೮೦೦೦ |
| ೧೦–೧೪ | ೨೨೪ | ೨೬೧೫ | ೨೭೩ | ೩೧೯೬ | ೩೦೦ | ೩೫೦೦ | ೩೫೧ | ೪೧೯೩ |
| ೧೫–೨೯ | ೨೭೭ | ೫೫೫೮ | ೩೨೯ | ೬೬೭೯ | ೪೧೬ | ೮೩೩೯ | ೪೭೦ | ೯೫೬೨ |
| ೩೦–೪೯ | ೯೦ | ೩೩೩೭ | ೧೦೦ | ೩೭೮೬ | ೧೩೭ | ೫೧೪೦ | ೧೮೧ | ೬೭೪೫ |
| ೫೦–೯೯ | ೩೫ | ೨೪೦೨ | ೪೨ | ೨೮೪೨ | ೬೯ | ೪೭೯೨ | ೯೧ | ೬೨೧೪ |
| ೧೦೦–೧೯೯ | ೯ | ೧೮೯೨ | ೧೨ | ೧೬೦೪ | ೧೬ | ೨೨೪೯ | ೩೪ | ೪೫೦೫ |
| ೨೦೦–೪೯೯ | ೫ | ೧೪೪೪ | ೬ | ೧೪೮೪ | ೬ | ೧೭೨೨ | ೧೦ | ೨೯೨೬ |
| ೫೦೦–ಮೇಲ್ಪಟ್ಟು | | ೫೪೯ | — | — | — | — | ೧ | ೫೨೩ |

೧೯೩೧ರಲ್ಲಿ ಉತ್ಪತ್ತಿಯಾದ ಒಟ್ಟು ಕೃತಕ ರೇಶಿಮೆಯ ಬಟ್ಟೆಯಲ್ಲಿ ನೂರಕ್ಕೆ ೫೫ರಿಂದ ೬೦ರ ವರೆಗೆ ೪ ಜನರಿಗಿಂತ ಕಡಿಮೆ ಕೂಲಿಕಾರರಿರುವ ಕಾರಖಾನೆಗಳಲ್ಲಿ ತಯಾರಿಸಲಾಯಿತೆಂದು ಕಂಡುಬಂದಿದೆ. ಐದು ಜನರಿಗಿಂತ ಹೆಚ್ಚಿಗಿರುವ ಕಾರಖಾನೆಗಳು ೪೫೩೦೯೦೦೦ ಎಸ್ಸು ಬೆಲೆಬಾಳುವ ಕೃತಕ ರೇಶಿಮೆಯ ಬಟ್ಟೆಯನ್ನು ತಯಾರಿಸಿದ್ದರೆ ೪ ಜನರಿಗಿಂತ ಕಡಿಮೆಯಾಗಿರುವ ಕಾರಖಾನೆಗಳು ೫೯೪೬೩೦೦೦ ಎಸ್ಸುಗಳ ಬಟ್ಟೆಯು ತಯಾರಾಯಿತೆಂದು ವ್ಯಕ್ತವಾಗುತ್ತದೆ. ೧೯೩೨ರ ಕೊನೆಗೆ ೭೨೪೪೮ ಮಗ್ಗಗಳಿದ್ದುವು. ಅವುಗಳಲ್ಲಿ ೬೩೭೯೭ ಮಗ್ಗಗಳು ಐದು ಜನರಿಗಿಂತ ಕಡಿಮೆಯಾಗಿ ದುಡಿಯುವ ಕಾರಖಾನೆಗಳಲ್ಲಿ ಇದ್ದುವೆಂದು ತಿಳಿದು ಬಂದಿದೆ.

## ಕೂಲಿ-ಕುಂಬಳಿಯ ಪರಿಸ್ಥಿತಿ (Labour conditions)

ದಿನದಿನವೂ ಹೊಸ ಹೊಸ ಕಾರಖಾನೆಗಳು ಸ್ಥಾಪನವಾಗುವುದರಿಂದ ಇಲ್ಲಿ ದುಡಿಯುವ ಕೂಲಿಕಾರರ ಸಂಖ್ಯೆ ವಿಪರೀತ ಬೆಳೆಯುತ್ತಲಿದೆ. ೧೯೨೯ರಲ್ಲಿ ತೀರ ಚಿಕ್ಕ ಕಾರಖಾನೆಗಳಲ್ಲಿ ೧೩೫೬೦ ಕೂಲಿಕಾರರು ಇದ್ದರು. ಅದೇ ೧೯೩೩ರಲ್ಲಿ ೯೨೭೫೩ ಸಂಖ್ಯೆಗೇರಿತು. ತೀರ ಚಿಕ್ಕ ಈ ರೇಶಿಮೆ ಕಾರಖಾನೆಗಳಲ್ಲಿ ಒಟ್ಟು ೬೦೦೦೦ ಕೂಲಿಕಾರರು ದುಡಿಯುತ್ತಿದ್ದರು. ೧೯೩೩ರಲ್ಲಿದ್ದ ಒಟ್ಟು ೪೨೭೫೩ ಕೂಲಿಕಾರರಲ್ಲಿ ೩೫೩೦೮ ಹೆಂಗುಸರಿದ್ದರು. ಎಲ್ಲ ತರದ ನೇಯ್ಗೆಯ ಉದ್ಯಮಗಳಲ್ಲಿ ೧೬ ವರುಷಕ್ಕೆ ಕಡಿಮೆಯಾದ ತರುಣಿಯರ ಸಂಖ್ಯೆಯು ೧೦೦ಕ್ಕೆ ೨೦ರಂತಿದ್ದರೆ, ರೇಶಿಮೆ ಕಾರಖಾನೆಗಳಲ್ಲಿ ೧೦೦ಕ್ಕೆ ೧೨ರಂತಿರುವದು. ಈ ನೇಯ್ಗೆಯು ನಾಜೂಕಾಗಿರುವದು; ಹೆಚ್ಚು ಜಾಣತನವು ಬೇಕಾಗುವದು.

ಐದು ಜನರಿಗಿಂತ ಕಡಿಮೆಯಿದ್ದ ಕಾರಖಾನೆಗಳಲ್ಲಿ ೧೦೦ಕ್ಕೆ ೧೫ರಂತೆ ಮನೆಯ ಜನರೇ ದುಡಿಯುತ್ತಿರುವರು. ಈ ಮನೆತನದ ಕೂಲಿಕಾರರಲ್ಲಿ ೧೦೦ಕ್ಕೆ ೮೦ರಷ್ಟು ಹೆಂಗುಸರಿರುವರು. ಗಂಡಸರು ಯಂತ್ರಗಳನ್ನು ನಡೆಯಿಸುತ್ತಾರೆ; ಬಟ್ಟೆಯನ್ನು ಮಡಚುತ್ತಾರೆ. ಉಳಿದೆಲ್ಲ

ಕೆಲಸಗಳನ್ನು ಹೆಂಗುಸರೇ ಮಾಡುತ್ತಾರೆ. ಯಂತ್ರಗಳು ವಿದ್ಯುಚ್ಛಕ್ತಿಯಿಂದ ನಡೆಯುವುದರಿಂದ ಶ್ರಮವಿಲ್ಲದೆ ಒಬ್ಬಳು ಎರಡು ಮಗ್ಗಗಳನ್ನು ನಡೆಯಿಸಬಲ್ಲಳು. ವಿದ್ಯುಚ್ಛಕ್ತಿಯು ಹೋಲೆಯಗ್ಗವಾಗಿರುವುದರಿಂದ ಮನೆತನದ ಕಾರಖಾನೆಗಳೂ ಸಹ ಈ ಶಕ್ತಿಯಿಂದಲೇ ನಡೆಯುತ್ತಲಿವೆ.

ಇಂಥ ಕಾರಖಾನೆಗಳ ಸಂಪಾದನೆಯೋ ಮನೆತನದ ವೆಚ್ಚಕ್ಕೆ ವಿನಿಯೋಗವಾಗುವುದರಿಂದ ಇವುಗಳ ಉತ್ಪನ್ನವೆಷ್ಟಾಗುವುದೆಂದು ಗೊತ್ತುಪಡಿಸುವುದು ಸಾಧ್ಯವಾಗಲಾರದು. ಆದರೆ ಹೊರಗಿನ ಕೂಲಿಯವರು ೬೦ ಗಜ ಬಟ್ಟೆಯನ್ನು ನೇಯ್ದರೆ, ೪೫ರಿಂದ ೬೦ ಸೆನ್ನುಗಳ ವರೆಗೆ ಸಂಪಾದಿಸುವರು. ಸಾಧಾರಣವಾಗಿ ತಿಂಗಳೊಂದಕ್ಕೆ ೨೦-೩೦ ಎನ್ನುಗಳಷ್ಟು ಕೂಲಿಯು ದೊರೆಯುವುದು.

ಈ ಉದ್ಯಮದಲ್ಲಿ ಕೂಲಿಯವರು ದಿನಾಲು ೧೦ ತಾಸು ದುಡಿಯಬೇಕಾಗುವುದು. ತಿಂಗಳಿಗೆ ಮೂರು ದಿನಗಳ ರಜೆಯು ದೊರೆಯುತ್ತದೆ. ಸರಕಾರದವರು ಅನೇಕ ಪ್ರಾಂತಗಳಲ್ಲಿ ವಿದ್ಯುಚ್ಛಕ್ತಿಯನ್ನು ಕೆಲವೊಂದು ತಾಸುಗಳ ಮೇಲೆ ನಿಲ್ಲಿಸುವುದರಿಂದ, ಕಾರಖಾನೆಯವರಿಗೆ ಕೂಲಿಯವರನ್ನು ಹೆಚ್ಚು ಹೊತ್ತು ದುಡಿಸಿಕೊಳ್ಳಲು ಮಾರ್ಗವಿಲ್ಲದಾಗಿದೆ. ಕೂಲಿಯವರಿಗೆ ಹಳ್ಳಿಗಳಲ್ಲಿ ಮಾತ್ರ ೧೨ ತಾಸಿನ ದುಡಿತವು ತಪ್ಪಿರುವುದಿಲ್ಲ. ಅದರಿಂದ ಹುಟ್ಟುವಳಿಯ ಪ್ರಮಾಣವು ಹೆಚ್ಚಾಗಿ ವ್ಯಾಪಾರವು ಭರದಿಂದ ಸಾಗುತ್ತಲಿದೆ.

ಬಹಳ ಕಾರಖಾನೆಗಳ ಒಡೆಯರು ಕೂಲಿಕಾರರ ಆರೋಗ್ಯದ ಜೀವವಿಮೆಯ ಕಂತುಗಳನ್ನು ತುಂಬುವುದಲ್ಲದೆ ಉಚಿತವಾಗಿ ತಿಂಡಿಯನ್ನು ಒದಗಿಸುತ್ತಾರೆ. ಪ್ರತಿಯೊಂದು ಕಾರಖಾನೆಯಲ್ಲಿ ವಸತಿಗೃಹ (Dormitory) ವಿರುತ್ತದೆ. ಕೂಲಿಕಾರರಿಗೆ ಪುಕ್ಕಟೆಯಾಗಿ ದೊರೆಯುವುದು. ಅಲ್ಲಿ ಅವರು ಸುಖವಾಗಿ ವಾಸಿಸುವರು.

ಹಳ್ಳಿಗಳಲ್ಲಿ ಜನಸಂಖ್ಯೆಯು ಹೆಚ್ಚಿ, ಬೇಸಾಯವನ್ನು ಮಾಡಲು ಸಾಕಷ್ಟು ಭೂಮಿಯು ದೊರೆಯದಿರುವುದರಿಂದ ತರುಣ-ತರುಣಿಯರು ಕೈಮುಚ್ಚಿಕೊಂಡು ಕೂಡ್ರುವುದಿಲ್ಲ. ಸಮೀಪದ ಯಾವುದಾದರೊಂದು

ಕಾರಖಾನೆಯಲ್ಲಿ ಸೇರಿಕೊಳ್ಳುವರು. ಜಪಾನಿಯರಲ್ಲಿ ಇಂಥ ಉದ್ಯೋಗ ಪ್ರಿಯತೆಯು ರಕ್ತಗತವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು.

## ಕೈಗಾರಿಕೆಯ ವಿನ್ಯಾಸ ಮತ್ತು ನೇಕಾರನ ಸ್ಥಿತಿಗತಿ

ಪ್ರತಿಯೊಂದು ಕಾರಖಾನೆಯಲ್ಲಿ ಬಟ್ಟೆಯು ತಯಾರಾಗುವುದು. ನಾಲ್ಕು ಸಾವಿರ ಮಗ್ಗಗಳಿಗಿಂತ ಹೆಚ್ಚಾಗಿರುವ ಕಾರಖಾನೆಗಳು ಬೆಳೆಯುತ್ತಲೇ ಇವೆ. ಇಷ್ಟಾದರೂ ೫೦ ಮಗ್ಗಗಳುಳ್ಳ ಕಾರಖಾನೆಗಳೂ ಸಹ ಬಟ್ಟೆಯ ನಿರ್ಮಿತಿಯಲ್ಲಿಯೇ ಹೆಚ್ಚಾಗಿ ತೊಡಗಿವೆ. ವಸತಿಗೃಹವುಳ್ಳ ಕಾರಖಾನೆಗಳಿಗೆ ಕೂಲಿಯುವರು ತಾವಾಗಿಯೇ ಬರುತ್ತಾರೆ. ಆದರೆ ವಸತಿಗೃಹವಿಲ್ಲದ ಕಾರಖಾನೆಗಳು ಹೆಚ್ಚು ಕೂಲಿಯುವರಿರುವ ಹಳ್ಳಿಗಳಿಗೆ ಹೋಗಿ ಕೆಲಸವನ್ನು ಸಾಗಿಸದೆ ಬೇರೆ ಮಾರ್ಗವೇ ಇಲ್ಲ. ಹಳ್ಳಿಗಳಲ್ಲಿಯ ಕುಶಲ ಕೂಲಿಕಾರರಲ್ಲಿ ೧೦೦ಕ್ಕೆ ೯೦ರಷ್ಟು ಈ ಕೃತಕ ರೇಶಿಮೆಯ ಬಟ್ಟೆಗಳನ್ನು ನೇಯುವುದರಲ್ಲಿ ತೊಡಗಿರುತ್ತಾರೆ. ಬೇಸಾಯದ ಬಿಡುವಿನ ಕಾಲದಲ್ಲಿ ಎಲ್ಲ ಜನರು ಈ ಉದ್ಯಮವನ್ನೇ ಕೈಕೊಳ್ಳುವುದರಿಂದ ಮಾಲು ವಿಪರೀತವಾಗಿ ತಯಾರಾಗುತ್ತದೆ.

ಹಣವುಳ್ಳ ದೊಡ್ಡ ಕಾರಖಾನೆಗಳು ರೇಶಿಮೆ ನೂಲನ್ನು ಕೊಂಡುಕೊಳ್ಳುವುದಲ್ಲದೆ ತಯಾರಾದ ಬಟ್ಟೆಯನ್ನು ನೇರವಾಗಿ ಮಾರುವುದಕ್ಕೆ ಸ್ವಾತಂತ್ರ್ಯವನ್ನು ಪಡೆದಿವೆ. ಸಣ್ಣಪುಟ್ಟ ಕಾರಖಾನೆಗಳಿಗೆ ಆ ಸ್ವಾತಂತ್ರ್ಯವಿರದ್ದರಿಂದ ದಲಾಲಿಗಳು ಪ್ರವೇಶಿಸಿ, ಅವರ ವ್ಯಾಪಾರವಾಗುವಂತೆ ಸಹಾಯಕರಾಗುವರು. ದಲಾಲಿಗಳು ಒಮ್ಮೊಮ್ಮೆ ಇಂಥ ಕಾರಖಾನೆಗಳಿಗೆ ಸಾಲವನ್ನಾಗಲಿ, ಮುಂಗಡ ಹಣವನ್ನಾಗಲಿ ಕೊಟ್ಟು ತಮಗೆ ಹೆಚ್ಚು ದಲಾಲಿಯು ದೊರೆಯುವಂತೆ ಮಾಡಿಕೊಳ್ಳುವರು. ಆದರಿಂದ ಈ ಸಣ್ಣಪುಟ್ಟ ಕಾರಖಾನೆಗಳಿಗೆ ಕೆಲವೊಂದು ಪ್ರಮಾಣದಿಂದ ಹಾನಿಯಾಗುವುದು. ಇತ್ತೀಚೆಗೆ ಸರಕಾರದವರು ಬೇಕಾದಷ್ಟು ಸಹಕಾರ ಸಂಘಗಳನ್ನು ತೆರೆದಿರುವುದರಿಂದ ಸಣ್ಣಪುಟ್ಟ ಕಾರಖಾನೆಗಳು ಕಡಿಮೆ ಒಡ್ಡಿ ದರದಿಂದ ಸಾಲವನ್ನು ಪಡೆದು, ಸರಕನ್ನು ಸಮಯಾನುಸಾರವಾಗಿ ಹೆಚ್ಚಿನ ಬೆಲೆಗೆ ಮಾರಿಕೊಳ್ಳುವ ಸುಸಂಧಿಯನ್ನು ಪಡೆದಿರುವವು.

೧೯೩೨ರಲ್ಲಿ ಕೃತಕ ರೇಷ್ಮೆಯ ನೂಲಿನ ಹಾಗೂ ನೇಯ್ಗೆಯ ಕಾರಖಾನೆಗಳ ಒಡೆಯರೆಲ್ಲರು ಒಕ್ಕಟ್ಟಾಗಿ ಒಂದು ಸಂಘವನ್ನು ಸ್ಥಾಪಿಸಿಕೊಂಡು, ಪ್ರತಿಯೊಬ್ಬರು ಎಷ್ಟೆಷ್ಟು ಸರಕನ್ನು ತೆಗೆಯಬೇಕೆಂದು ಗೊತ್ತುಪಡಿಸಿಕೊಂಡಿದ್ದಾರೆ. ಈ ಬಂಧನದ ಮೂಲಕ ನೂಲು ಕಡಿಮೆ ಪ್ರಮಾಣದಲ್ಲಿ ಹೊರಡುವುದರಿಂದ ಬೆಲೆಯೂ ಹೆಚ್ಚಿಗೆ ದೊರಕಿ, ಪ್ರತಿಯೊಬ್ಬನೂ ತಕ್ಕಷ್ಟು ಲಾಭವನ್ನು ಪಡೆಯುತ್ತಾನೆ. ಕೃತಕ ರೇಶಿಮೆಯ ಬಟ್ಟೆಯನ್ನು ಹೊರದೇಶಗಳಿಗೆ ಕಳಿಸುವ ವ್ಯಾಪಾರಸ್ಥರು ತಮ್ಮದೊಂದು ಸಂಘವನ್ನು ಸ್ಥಾಪಿಸಿಕೊಂಡು ಇದ್ದ ಪೈಪೋಟಿಯನ್ನು ಹೊಡೆದುಹಾಕಿದ್ದಾರೆ.

ಜಪಾನಿನ ಕೃತಕ ರೇಶಿಮೆಯ ನೂಲಿಗೂ, ಬಟ್ಟೆಗೂ ಇಂಡಿಯಾ, ಮಂಚೂರಿಯಾ ದೇಶಗಳೇ ಮುಖ್ಯವಾದ ಗಿರಾಕಿಗಳು. ಜಪಾನಿನಿಂದ ನಿರ್ಯಾತವಾಗುವ ರೇಶಿಮೆ ನೂಲಿನಲ್ಲಿ ೧೦೦ಕ್ಕೆ ೩೫ರಂತೆ ಇಂಡಿಯಾಕ್ಕೆ ಬರುತ್ತಲಿದೆ. ಇಂದು ಜಪಾನಿನ ಕೃತಕ ರೇಶಿಮೆಯ ನೂಲು, ಬಟ್ಟೆ ಪ್ರವೇಶಿಸದ ದೇಶಗಳು ಜಗತ್ತಿನಲ್ಲಿ ಎಲ್ಲಿಯೂ ಇರುವುದಿಲ್ಲ.

**ಜಪಾನಿನ ಕೃತಕ ರೇಶಿಮೆ ನೂಲು ಹಾಗು ಬಟ್ಟೆಯ ನಿರ್ಯಾತವು.**

| ದೇಶಗಳು | ನೂಲು ೧೯೩೬ (ಪೆಟ್ಟಿಗೆಗಳಲ್ಲಿ) | ಬಟ್ಟೆ ೧೯೩೬ (ಚದರ ಗಜ) |
|---|---|---|
| ಚೀನಾ ಮತ್ತು ಹಾಂಗಕಾಂಗ | ೩೬೦೧೧ | ೨೮೬೭೬೯೦೦ |
| ಇಂಡಿಯಾ | ೧೪೧೨೪ | ೯೨೦೮೧೨೦೦ |
| ಮಂಚೂರಿಯಾ | ೧೩೧೫೯೭ | ೫೭೮೧೪೨೦೦ |
| ಜಾವಾ ಮೊದಲಾದ ದ್ವೀಪಗಳು | ೧೨೬೩೮ | ೫೧೫೫೫೬೦೦ |
| ಏಶಿಯಾಖಂಡದ ಇತರ ಭಾಗಗಳು | ೧೮೦೬೦ | ೮೭೮೦೯೩೦೦ |
| ಯುರೋಪ | ೧೮೯೪೯ | ೨೧೪೦೧೩೦೦ |
| ಉತ್ತರ ಅಮೇರಿಕಾ | ೬೦೯೮ | ೫೨೮೮೮೦೦ |
| ಮಧ್ಯ ಅಮೇರಿಕಾ | ೩೮೧೭೮ | ೨೩೩೩೮೭೦೦ |
| ದಕ್ಷಿಣ ಅಮೇರಿಕಾ | ೪೭೦೬ | ೨೮೬೨೫೦೦ |
| ಆಫ್ರಿಕಾ | ೧೮೮೫೩ | ೫೬೭೬೭೨೦೦ |
| ಆಸ್ಟ್ರೇಲಿಯಾ | ೧೬೪೬೮ | ೭೩೬೯೨೮೦೦ |

## ಉಣ್ಣೆಯ ಕೈಗಾರಿಕೆ

ಜಪಾನಿನಲ್ಲಿ ಉಣ್ಣೆಬಟ್ಟೆಗಳ ಕೈಗಾರಿಕೆಯು ೧೫ನೆಯ ಶತಮಾನದಿಂದಿದ್ದರೂ ೧೮೬೮ರಲ್ಲಿ ಸ್ಥಾಪಿತವಾದ ರಾಜ್ಯದಾಡಳಿತೆಯ ಪ್ರೋತ್ಸಾಹದಿಂದ ರೂಪುಗೊಂಡಿತು. ೧೮೯೭ರಲ್ಲಿ ಸರಕಾರವು ಟೋಕಿಯೋದಲ್ಲಿ ಹೊಸ ತರದ ಕಾರಖಾನೆಯೊಂದನ್ನು ಸ್ಥಾಪಿಸಿತು. ಇಲ್ಲಿ ತಯಾರಾದ ಮಾಲು ಕೀಳ್ತರಗತಿಯದಿದ್ದು ಬೆಲೆಯೂ ಹೆಚ್ಚಾಗಿದ್ದಿತು. ಈ ಕಾರಖಾನೆಯು ನಷ್ಟದಲ್ಲಿದ್ದರೂ ಜಪಾನಿಯರಿಗೆ ಈ ಕೈಗಾರಿಕೆಯನ್ನು ಸುಧಾರಿಸಲು ಪಾಠವನ್ನು ಕಲಿಸಿತು.

೧೮೯೪-೯೫ರಲ್ಲಾದ ಚೀನಾ–ಜಪಾನದ ಯುದ್ಧದ ಮೂಲಕ ಜಪಾನಿಯರ ಸೈನ್ಯಕ್ಕೆ ಉಣ್ಣೆಬಟ್ಟೆಯನ್ನು ಒದಗಿಸುವದಕ್ಕಾಗಿ ಅನೇಕ ಕಾರಖಾನೆಗಳುಂಟಾದುವು. ೧೮೮೯ರಲ್ಲಿ ಸರಕಾರವು ಹೊರಗಿನಿಂದ ಬರುವ ಉಣ್ಣೆಯರಿವೆಯ ಮೇಲಿದ್ದ ೧೦೦ಕ್ಕೆ ೫ರಂತಿದ್ದ ಸುಂಕವನ್ನು ಮಾಲಿನ ಬೆಲೆಯ ೧/೪ಕ್ಕೇರಿಸಿತು. ಇಷ್ಟು ಅನುಕೂಲವಿದ್ದರೂ ಇಲ್ಲಿಯ ಕಾರಖಾನೆಗಳಿಂದ ಸಾಕಷ್ಟು ಬಟ್ಟೆಯು ಹೊರಡದ್ದರಿಂದ ಪರದೇಶದ ಮಾಲು ಬರುತ್ತಲೇ ಇತ್ತು. ಪರದೇಶದ ಕೆಲವು ಕಾರಖಾನೆಗಳು ಇಲ್ಲಿ ಸ್ಥಾಪಿಸಲ್ಪಟ್ಟು ಉಣ್ಣೆಬಟ್ಟೆಯನ್ನು ಪೂರೈಸಿ ಅಪಾರವಾದ ಲಾಭ ಪಡೆಯುವದನ್ನು ಕಂಡು, ಸರಕಾರವೇ ಸಹಿಸದೆ, ಸಾರ್ವಜನಿಕ ಸಂಸ್ಥೆಗಳಿಗೆ ಬಡ್ಡಿಯಿಲ್ಲದೆ ಸಾಲವನ್ನು ಕೊಟ್ಟು ಈ ಕೈಗಾರಿಕೆಗೆ ಸಂಪೂರ್ಣ ಬೆಂಬಲವನ್ನಿತ್ತಿತು. ೧೯೦೪-೫ರಲ್ಲಿ ನಡೆದ ರಶಿಯಾ-ಜಪಾನಿಯರ ಯುದ್ಧದ ಜಯದಿಂದ ಮುಸಲೀನು (Muslin) ಕೈಗಾರಿಕೆ ಬೆಳೆಯಿತು. ೧೯೧೧ರಲ್ಲಿ ಸರಕಾರವು ಮತ್ತೆ ಇಲ್ಲಿರುವ ಪರದೇಶದ ಕಾರಖಾನೆಗಳ ಮೇಲೆ ವಿಪರೀತ ಸುಂಕವನ್ನು ಹೇರಿದ್ದರಿಂದ, ೧೯೧೫ರ ಸುಮಾರಿಗೆ ಅವೆಲ್ಲವುಗಳು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಪಲಾಯನ ಸೂತ್ರವನ್ನು ಹೇಳಿಸಿದುವು. ಮಹಾಯುದ್ಧವು ಆರಂಭಿಸಿದೊಡನೆ ರಶಿಯಾದೇಶವು ಉಣ್ಣೆಬಟ್ಟೆಗಾಗಿ ಒಳ್ಳೇ ಗಿರಾಕಿಯಾಯಿತು. ಆಸ್ಟ್ರೇಲಿಯಾದಿಂದ ಬರುತ್ತಿದ್ದ ಉಣ್ಣೆಯು ನಿಂತಿತು. ದಕ್ಷಿಣ ಆಫ್ರಿಕಾ, ದಕ್ಷಿಣ ಅಮೇರಿಕದಿಂದ ಉಣ್ಣೆಯು ಬರ

ಹತ್ತಿ ಈ ಉದ್ಯಮವು ನಾಶಹೊಂದದಂತೆ ಮಾಡಿತು. ಯುರೋಪಿನಲ್ಲಿ ಶಾಂತಿಯು ನೆಲೆಸಿದಾಗ ಅಲ್ಲಿಯ ಎಲ್ಲ ದೇಶಗಳ ಕಾರಖಾನೆಗಳಿಂದ ಉಣ್ಣೆಯ ಬಟ್ಟೆಯು ಕಡಿಮೆ ಬೆಲೆಗೆ ದೊರೆಯಹತ್ತಿದ್ದರಿಂದ ಜಪಾನದ ಎಷ್ಟೋ ಕಾರಖಾನೆಗಳು ಮುಚ್ಚಲ್ಪಟ್ಟವು. ಹೀಗೆ ೧೯೩೧ರ ವರೆಗೆ ನಷ್ಟಕ್ಕೀಡಾದವು. ಅಲ್ಲಿಂದೀಚೆಗೆ ಈ ಉದ್ಯಮವು ಊರ್ಜಿತಾವಸ್ಥೆಯಲ್ಲಿಯೇ ಇದೆ.

ಈ ಕೈಗಾರಿಕೆಯು ಇಷ್ಟು ಪ್ರಗತಿಯಾಗಲು ಮುಖ್ಯ ಕಾರಣವೆಂದರೆ ಜಪಾನಿನಲ್ಲಿಯೇ ಗಿರಾಕಿಗಳು ಹೆಚ್ಚಾದವು. ಮಹಾಯುದ್ಧದ ಮೊದಲು ಜಪಾನವು ಸಾಲಗಾರರ ದೇಶವಾಗಿತ್ತು. ಯುರೋಪದ ಕೈಗಾರಿಕೆಗಳ ದೇಶಗಳೆಲ್ಲ ಯುದ್ಧದಲ್ಲಿ ತೊಡಗಿದ್ದರಿಂದ ಜಪಾನದೇಶದ ಕೈಗಾರಿಕೆಗಳು ಬೆಳೆದವು. ಈ ಅವಧಿಯಲ್ಲಿ ಜಪಾನವು ಅಪಾರ ಲಾಭವನ್ನು ಪಡೆದು ಸಾಲವನ್ನು ತೀರಿಸಿದ್ದಲ್ಲದೆ ಸಿರಿವಂತಿಕೆಯು ನಾಡಾಗಿ ಪರಿಣಮಿಸಿತು. ೧೯೧೮ರ ಹೊತ್ತಿಗೆ ಉಣ್ಣೆಯ ಬಟ್ಟೆಯನ್ನು ಪ್ರತಿಯೊಬ್ಬರೂ ಧರಿಸತೊಡಗಿದರು. ೧೯೧೪ರ ಮೊದಲು ತಲೆಯೊಂದಕ್ಕೆ ೧೯೩ ಪೌಂಡಿನಷ್ಟು ಈ ಬಟ್ಟೆ ಖರ್ಚಾಗುತ್ತಿತ್ತು. ಆದರೆ ಅದೇ ೧೯೧೮ರ ಹೊತ್ತಿಗೆ— ೧.೭೦ ಪೌಂಡಿನಷ್ಟು, ೧೯೩೩ರಕ್ಕೆ ೩.೭೨ ಪೌಂಡಿನಷ್ಟು ಖರ್ಚಾಗತೊಡಗಿತು. ನೇಯಲು ಬೇಕಾದ ನೂಲು (worsted yarn) ವಿಪುಲವಾಗಿ ಸುಲಭ ಬೆಲೆಗೆ ದೊರಕಹತ್ತಿದ್ದರಿಂದ ಪ್ರಗತಿಯಾಗಲು ಅನುಕೂಲವಾಯಿತು. ಉಡುಪುತೊಡುಪುಗಳಲ್ಲಿ ಹೊಸ ಹೊಸ ರೀತಿಗಳುಂಟಾದ್ದರಿಂದ ಗಿರಾಕಿಗಳ ಇಷ್ಟದಂತೆ ಬಟ್ಟೆಯು ಚಿಕ್ಕ ಚಿಕ್ಕ ಕಾರಖಾನೆಗಳಲ್ಲಿ ತಯಾರಾಗತೊಡಗಿತು. ದೊಡ್ಡವುಗಳಲ್ಲಿ ಈ ಮಾದರಿಯ ಬಟ್ಟೆಯು ತಯಾರಾಗಲು ಅಷ್ಟು ಅವಕಾಶವಿರುವದಿಲ್ಲ. ಆದ್ದರಿಂದ ಸಣ್ಣಪುಟ್ಟ ಕಾರಖಾನೆಗಳು ಬೆಳೆದು ನೂರಕ್ಕೆ ೬೧ರಂತೆ ಸರಕು ಹೊರಡಹತ್ತಿತು. ಮಸ್ಲಿನ್ ಬಟ್ಟೆಯು ಹುಟ್ಟುವಳಿಯೂ ಇಂಥವುಗಳಲ್ಲಿಯೇ ಹೆಚ್ಚಿಗೆ ತಯಾರಾಗುತ್ತದೆ. ಆಚಿ ಪ್ರಾಂತ್ಯದಲ್ಲಿ ೨೦೦ ಕೂಲಿಯವರಿಗಿಂತ ಮಿಕ್ಕಿದ ಏಳು ದೊಡ್ಡ ಕಾರಖಾನೆಗಳಿವೆ. ಉಣ್ಣೆಬಟ್ಟೆಯ ತಯಾರಿಕೆಗೆ ಪ್ರಾಂತ್ಯದ ವಾಯುಗುಣವೂ ಒಂದು ಮುಖ್ಯ ಕಾರಣವಿದೆ. ಇಲ್ಲಿ ರೇಲ್ವೆ, ಹಡಗು

ಇವುಗಳ ಅನುಕೂಲತೆಯಿರುವದರಿಂದ ಕಾರಖಾನೆಗಳಿಗೆ ಬಹು ಸುಲಭ ವಾಗಿರುತ್ತದೆ.

೧೯೩೪ರಲ್ಲಿ ನಾಲ್ವತ್ತುಸಾವಿರ ಕೂಲಿಕಾರರಿದ್ದು, ಅವರಲ್ಲಿ ನೂರಕ್ಕೆ ೮೦ರಂತೆ ಹೆಂಗುಸರಿದ್ದರು. ಗಂಡಸರು ಹೆಚ್ಚಾಗಿ ಯಂತ್ರ ನಡೆಯಿಸುವುದರಲ್ಲಿ, ಹೆಂಗಸರು ನೇಯುವುದರಲ್ಲಿ ತೊಡಗುವರು. ಹೆಂಗುಸರು ಇತ್ತಿ ವರುಷದಿಂದ ೫ ವರುಷಗಳ ವರೆಗೂ, ಗಂಡಸರು ೭-೧೦-೨೦ ವರ್ಷಗಳ ವರೆಗೂ ಉದ್ಯಮದಲ್ಲಿ ದುಡಿಯುತ್ತಾರೆ. ವಿದ್ಯುಚ್ಛಕ್ತಿಯ ಉಪಯೋಗದಿಂದ ಅಲ್ಪಾವಧಿಯಲ್ಲಿ ಹೆಚ್ಚು ಮಾಲು ತಯಾರಾಗಿ ಕಾರಖಾನೆಗಳು ಲಾಭವನ್ನು ಹೊಂದಿ, ಸಾವಿರಾರು ಕೂಲಿಕಾರರಿಗೆ ಗಂಜಿಯನ್ನು ಸುಸೂತ್ರವಾಗಿ ಒದಗಿಸುತ್ತವೆ. ಅಗ್ಗವಾದ ವಿದ್ಯುಚ್ಛಕ್ತಿ, ಸುರಿತ-ಕಲಿತ ಕೂಲಿಕಾರರು, ಸರಕಾರದ ಪೂರ್ಣ ಬೆಂಬಲವಿದ್ದುದರಿಂದ ಜಪಾನಿನಲ್ಲಿ ಯಾವ ಕೈಗಾರಿಕೆಯೂ ಮುಗ್ಗಲಾರದು. ಹಾನಿ ಹೊಂದಲಾರದು. ಜಪಾನಿನ ವಾಯುಗುಣ ಹಾಗು ಭೂಮಿಯ ಗುಣಗಳಿಂದ ಒಣ ಉಣ್ಣೆಯ ಹುಟ್ಟುವಳಿಗೆ ಆಸ್ಪದವಿಲ್ಲ. ಇತ್ತೀಚೆಗೆ ಮಂಚೂರಿಯಾದಲ್ಲಿ ಕುರಿಗಳ ಸಾಗುವಳಿಯು ಆರಂಭವಾಗಿದೆ. ಅದರ ಫಲಾಫಲವು ಮುಂದೆ ಗೊತ್ತಾಗಬೇಕು; ಈಗ ಹೇಳಲು ಬರುವಂತಿಲ್ಲ.

## ಜಪಾನಿಗೆ ಪರದೇಶದಿಂದ ಬರುವ ಉಣ್ಣೆ

(ಒಂದು ಸಾವಿರ ಪೌಂಡುಗಳ ತೂಕ)

| ದೇಶ | ೧೯೩೨ | ೧೯೩೩ | ೧೯೩೪ | ೧೯೩೫ | ೧೯೩೬ |
|---|---|---|---|---|---|
| ಆಸ್ಟ್ರೇಲಿಯಾ | ೧೯೮೪೨೬ | ೨೨೬೪೩೦ | ೧೫೫೩೭೫ | ೨೩೦೨೬೯ | ೧೫೪೬೯೧ |
| ನ್ಯೂಜಿಲಂಡ್ | ೨೯೯೨ | ೧೮೩೫ | ೧೦೧೮೭ | ೭೨೭೬ | ೨೩೭೩೭ |
| ದ. ಅಮೇರಿಕಾ | ೧೩೪೧ | ೬೧೨೬ | ೧೦೫೭೯ | ೪೨೧೨ | ೯೭೦೭ |
| ದ. ಆಫ್ರಿಕಾ | ೨೩೨೩ | ೪೦೨೯ | ೫೨೩೩ | ೨೫೯೪ | ೧೮೬೨೧ |
| ಗ್ರೇಟ ಬ್ರಿಟನ್ | ೫೭೫ | ೧೨೪೫ | ೮೫೪ | ೭೮೩ | ೧೧೨೩ |
| ಇತರ ದೇಶಗಳು | ೧೧೯೯ | ೧೯೫೦ | ೨೧೪೭ | ೨೧೩೭ | ೯೧೩೨ |
| ಒಟ್ಟು | ೨೦೬೮೫೮ | ೨೪೬೬೨೦ | ೧೮೪೩೭೯ | ೨೪೭೨೭೫ | ೨೧೭೦೧೫ |

## ಜಪಾನಿನ ಉಣ್ಣೆ ಪದಾರ್ಥಗಳ ನಿರ್ಯಾತ

| ವರುಷ | ದಾರ ಸಾವಿರ ಪೌಂ. | ಬೆಲೆ ಎನ್ನು | ಮಸಲಿನ್ ಬಟ್ಟೆ | | ಸರಜ್ ಬಟ್ಟೆ | | ಇತರ ಬೇರೆ ೧೦೦೦ ಎನ್ನುಗಳಿಂದ |
|---|---|---|---|---|---|---|---|
| ೧೯೩೧ | ೬೯೮ | ೮೩೧ | ೬೬೦ | ೨೮೦ | ೭೭೭ | ೬೯೫ | — |
| ೧೯೩೨ | ೧೨೮೯ | ೧೬೯೭ | ೧೫೧೬ | ೫೬೯ | ೨೮೫೪ | ೨೫೩೧ | — |
| ೧೯೩೩ | ೩೧೬೮ | ೫೨೯೨ | ೨೫೫೯ | ೧೧೯೯ | ೭೬೫೪ | ೮೦೨೦ | ೩೧೫೭ |
| ೧೯೩೪ | ೫೯೧೯ | ೧೨೧೮೪ | ೪೨೦೨ | ೨೧೮೫ | ೧೬೧೨೮ | ೧೯೦೯೮ | ೮೫೬೪ |
| ೧೯೩೫ | ೫೨೨೭ | ೯೬೮೮ | ೭೩೯೭ | ೧೨೨೭ | ೧೮೮೭೩ | ೭೩೪೧೫ | ೮೭೫೭ |
| ೧೯೩೬ | ೭೧೪೦ | ೧೫೩೧೩ | ೨೦೯೬ | ೧೦೬೬ | — | ೩೪೩೫೮ | ೧೧೫೯೮ |

## ಬೈಸಿಕಲ್ ಕೈಗಾರಿಕೆ

ಬೈಸಿಕಲ್ಲಿನ ಪ್ರವೇಶವು ಜಪಾನಿನಲ್ಲಿ ೧೮೮೧ರಲ್ಲಾಯಿತು. ಮೊದಲಿಗೆ ಪರದೇಶದ ಪಾದರಿಗಳೂ, ಹಣವಂತರೂ ಇದನ್ನುಪಯೋಗಿಸುತ್ತಿದ್ದರು. ಕೆಲವು ಜಪಾನಿಯರು ಕೈ ಸಲಕರಣೆಗಳಿಂದ ಬೈಸಿಕಲ್ಲನ್ನು ತಯಾರಿಸಿದರು. ಬೆಲೆ ಬಹಳವಾದ್ದರಿಂದ ಅವು ಬೆಳೆಯಲಿಲ್ಲ. ೧೯೦೪–೫ರ ರಶಿಯಾ-ಜಪಾನದ ಯುದ್ಧದ ನಿಮಿತ್ತವಾಗಿ ಈ ಕೈಗಾರಿಕೆಗೂ ಸಾಕಷ್ಟು ಪ್ರೋತ್ಸಾಹನವು ದೊರಕಿತು. ಯಂತ್ರಸಾಮಗ್ರಿಯೂ ವಿಪುಲವಾದ್ದರಿಂದ ಬೈಸಿಕಲ್ ಹುಟ್ಟುವಳಿಯೂ ಭರದಿಂದ ಸಾಗಿತು. ಕತ್ತಿ, ಕಠಾರಿಗಳನ್ನು ತಯಾರಿಸುತ್ತಿದ್ದ 'ಓಸಾಕಾ' ನಗರವು ಇಂದಿಗೆ ಬೈಸಿಕಲ್ ತಯಾರಿಕೆಯಲ್ಲಿ ಹೆಸರಾಗಿದೆ. ೧೯೦೭ರಲ್ಲಿ ಪರದೇಶದಿಂದ ೩೫ ಸಾವಿರ ಬೈಸಿಕಲ್ಲುಗಳು ಬಂದವು; ೧೨ ಲಕ್ಷ ಎನ್ನುಗಳನ್ನು ತೆತ್ತರು. ಇದಲ್ಲದೆ ಸಾಯಕಲ್ಲಿನ ಬೇರೆ ಬೇರೆ ಭಾಗಗಳಿಗೆ ೧೦ ಲಕ್ಷ ಎನ್ನುಗಳು ವೆಚ್ಚವಾದುವು. ೧೯೧೨ರಲ್ಲಿ ೧೬ ಸಾವಿರ ಸಾಯಕಲ್ಲುಗಳಿಗೆ ಜಪಾನವು ೮೩ ಲಕ್ಷ ಎನ್ನುಗಳನ್ನು ಪರದೇಶಕ್ಕೆ ತೆತ್ತಿತು. ಅಂತೂ ಜಪಾನಿನಲ್ಲಿ ಈ ಕೈಗಾರಿಕೆಯು ಕ್ರಮೇಣ ಬೆಳೆಯಿತು. ಈಗ ತಯಾರಾಗುವ ಬೈಸಿಕಲ್ಲುಗಳ ಸಂಖ್ಯೆಯಲ್ಲಿ ಅರ್ಧ ಭಾಗವು ಓಸಾಕಾ ನಗರದಲ್ಲಿ, ೩೦ ಭಾಗ ಟೋಕಿಯೋ

ದಲ್ಲಿ, ಉಳಿದ ೨೦ ಭಾಗ ಅಚಿ, ಹ್ಯೆಗೂ ಪ್ರಾಂತ್ಯದಲ್ಲಿ ತಯಾರಿಸಲ್ಪಡು ತ್ತಿದೆ.

ಮಹಾಯುದ್ಧದ ಕಾಲಕ್ಕೆ ಉಳಿದ ದೇಶಗಳು ಬೈಸಿಕಲ್ಲುಗಳ ಕೈ-ಗಾರಿಕೆಯನ್ನು ಬಿಟ್ಟದ್ದರಿಂದ ಜಪಾನಿಯರಿಗೆ ಒಳ್ಳೇ ಸಂಧಿಯು ದೊರ ಕಿತು. ಚೀನಾ, ಜಾವಾ, ಇಂಡಿಯಾ ಮೊದಲಾದವು ಬೈಸಿಕಲ್ಲುಗಳಿ ಗಾಗಿ ಜಪಾನಿಗೆ ಮೊರೆಹೊಕ್ಕವು. ತೆರಪಿಲ್ಲದೆ ಗಿರಾಕಿಗಳು ಸಿದ್ಧರೆಂದ ಮೇಲೆ ಜಪಾನು ಬೈಸಿಕಲ್ಲಿನ ಹುಟ್ಟುವಳಿಯನ್ನು ವಿತಿಮೀರಿ ಬೆಳೆಯಿ ಸಿತು. ೧೯೧೪ರಲ್ಲಿ ತಯಾರಾದ ಸಾಮುಕಲ್ಲುಗಳ ಬೆಲೆ ೬೦ ಸಾವಿರ ಎನ್ನು ಗಳಾಯಿತು. ಅದೇ ೧೯೧೯ರಲ್ಲಿ ೧,೨೫,೫೦,೦೦೦ ಎನ್ನುಗಳಿಗೆ ಮುಟ್ಟಿತು. ೧೯೩೧ರಲ್ಲಿ ಬಂಗಾರದ ಬೆಲೆಯು ಬದಲಾವಣೆಯಿಂದಂತೂ ಈ ಉದ್ಯಮವು ವಿಪರೀತವಾಗಿ ಬೆಳೆಯಲವಕಾಶವಾಯಿತು. ೧೯೩೨, ೩೩, ೩೪ರಲ್ಲಿ ನಿರ್ಯಾತವಾದ ಬೈಸಿಕಲ್ಲುಗಳ ಬೆಲೆ ಅನುಕ್ರಮವಾಗಿ ೬೦೦೦೦೦೦, ೧೨೦೦೦೦೦೦, ೧೯೦೦೦೦೦೦ ಎನ್ನುಗಳಷ್ಟು ಬೆಳೆಯಿತೆಂದರೆ ಈ ಉದ್ಯ ಮದ ಪ್ರಗತಿಯು ಕಲ್ಪನಾತೀತವಾಗಿದೆಯೆನಬಹುದು. ಇತ್ತೀಚೆಗೆ ಮಂಚೂರಿಯವು ಜಪಾನಿಯರ ಅಧಿಕಾರಕ್ಕೊಳಪಟ್ಟಿದ್ದರಿಂದ ಅಲ್ಲಿಯೂ ಈ ವ್ಯವಹಾರವು ತನ್ನ ಜಾಲವನ್ನು ಮನಬಂದಂತೆ ಪಸರಿಸಿದೆ.

ಇಲ್ಲಿ ಬೈಸಿಕಲ್ಲನ್ನು ಉಪಯೋಗಿಸದವರು ಇಲ್ಲವೇ ಇಲ್ಲ. ದಾರಿ ಗಳು ಇಕ್ಕಟ್ಟಾಗಿದ್ದು, ಮುಳ್ಳು ಮೊದಲಾದವು ಇಲ್ಲದ್ದರಿಂದ ಜಪಾನು ದೇಶವು ಬೈಸಿಕಲ್ಲುಗಳ ಉಪಯೋಗಕ್ಕೆ ತಕ್ಕುದಾದ ಪ್ರದೇಶವಾಗಿದೆ. ಪಟ್ಟಣಗಳಲ್ಲಿ ಮಾತ್ರ ವರುಷಕ್ಕೆ ೧೩ ಆಣೆ ಕರವನ್ನು ಕೊಡಬೇಕಾಗು ವುದು. ಇಲ್ಲಿಯ ಸಾಮುಕಲ್ಲುಗಳು ಬಹು ಗಟ್ಟಿಯಾಗಿದ್ದು ೩೦-೪೦ ಎನ್ನುಗಳಿಗೆ ದೊರೆಯುತ್ತವೆ; ೧೦-೧೨ ವರುಷಗಳ ವರೆಗೆ ತಾಳುತ್ತವೆ. ಪರದೇಶದವರೊಡನೆ ತುರುಸಿನ ವ್ಯಾಪಾರಕ್ಕಾಗಿ ೧೬ ಎನ್ನುಗಳಿಗೆ ದೊರೆಯುವಂಥ ಕೀಳು ಸಾಮುಕಲ್ಲುಗಳನ್ನು ಪರದೇಶಗಳಿಗೆ ಕಳಿಸು ತ್ತಾರೆ. ಆದರಿಂದ ಜಪಾನದ ಮಾಲು ತಾಳಿಕೆ ಬರುವುದಿಲ್ಲೆಂಬ ನಂಬಿ ಕೆಯು ಪರದೇಶಗಳಲ್ಲಿ ಉಂಟಾಗಿದೆ. ನಿಜವಾಗಿ ನೋಡಿದರೆ ಇಲ್ಲಿಯ ಸ ಮಾನುಗಳು ಹಾಗಿರುವುದಿಲ್ಲ. ಶ್ರೀಮಂತ ದೇಶಗಳಿಗೆ ಒಳ್ಳೆ ಸರಕು

ರವಾನೆಯಾಗುತ್ತಿದೆ. 'ಬೆಲೆಯಂತೆ ಬಾಳು' ಎಂಬಂತೆ ನಾನಾ ತರದ ಸರಕುಗಳು ವ್ಯಾಪಾರದ ಜಗತ್ತಿನಲ್ಲಿ ತಯಾರಾಗುತ್ತಲಿರುತ್ತವೆ. ಇಡಿ ಜಪಾನಿನಲ್ಲಿ ೧೯೩೫ರ ಕೊನೆಗೆ ೭೩೦೩೬೬೦ ಬೈಸಿಕಲ್ಲಿದ್ದುವು—ಅಂದರೆ— ಪ್ರತಿ ೯ ಜನರಿಗೊಂದು ಸಾಯಕಲ್ಲು ಬಿದ್ದಂತಾಯ್ತು. ಜಪಾನು ಇವುಗಳಿಂದ ಬಹಳ ಪ್ರಯೋಜನವನ್ನು ಪಡೆದಿದೆ. ರಶಿಯಾ ದೇಶವೊಂದನ್ನು ಬಿಟ್ಟು ಜಗತ್ತಿನ ಪೇಟೆಯಲ್ಲಿ ಜಪಾನದ ಸಾಯಕಲ್ಲುಗಳು ಓಡಾಡುವವು.

ಸಾಧಾರಣವಾಗಿ ಸಾಯಕಲ್ಲು ೩೦ ಭಾಗಗಳಿಂದ ಹೊಂದಿಸಲ್ಪಡುತ್ತಿದೆ. ಇಂಥ ಎಲ್ಲ ಭಾಗಗಳು ಒಂದೇ ಕಾರಖಾನೆಯಲ್ಲಾಗುವದಿಲ್ಲ. ಬೇರೆ ಬೇರೆ ಕಡೆಗೆ ಬೇರೆ ಬೇರೆ ಭಾಗಗಳು ತಯಾರಾಗಿ ಬೈಸಿಕಲ್ಲು ತಯಾರಾಗುತ್ತದೆ. "Standardisation of the various parts of the bicycle was one of the prime factors which made a small factory system possible in Japan" ಎಂದಿರುವದರಿಂದ ಈ ಉದ್ಯೋಗವು ಇನ್ನು ಮುಂದುವರಿಯಿತು. ಈ ಉದ್ಯಮದಲ್ಲಿ ಹೆಚ್ಚಾಗಿ ಹುಡುಗರು ದುಡಿಯುತ್ತಾರೆ. ಹೆಂಗುಸರು ಸಾಮಾನು ಕಟ್ಟುವದಕ್ಕೆ ಉಪಯೋಗ ಬೀಳುತ್ತಾರೆ. ಕೂಲಿಯಾದರೂ ಕಡಿಮೆ ದೊರೆಯುವದು. ಇವೆಲ್ಲ ಕಾರಣಗಳಿಂದ ಬೈಸಿಕಲ್ಲುಗಳು ಅಗ್ಗವಾಗಿ ದೊರೆಯಲವಕಾಶವುಂಟಾಗಿದೆ.

### ಬೈಸಿಕಲ್ ಹಾಗು ಭಾಗಗಳು

| | ಆಯಾತ (ಎನ್ನುಗಳು) | ನಿರ್ಯಾತ | | ಸರಕಿನ ಒಟ್ಟು ಬೆಲೆ |
|---|---|---|---|---|
| ೧೯೩೧ | ೧೧೫೩೦೦೦ | ೦೭೧೧೯೦೦೦ | ೧೯೧೩ | ೦೦೪೬೦೦೦೦ |
| ೧೯೩೨ | ೦೭೯೫೦೦೦ | ೦೦೬೦೨೮೦೦ | ೧೯೧೮ | ೧೦೫೪೮೦೦೦ |
| ೧೯೩೩ | ೦೬೧೯೦೦೦ | ೧೧೧೧೪೦೦೦ | ೧೯೨೯ | ೧೪೯೯೭೦೦೦ |
| ೧೯೩೪ | ೦೦೭೩೩೦೮ | ೧೫೯೦೪೦೦೦ | ೧೯೩೦ | ೧೫೭೫೩೦೦೦ |
| ೧೯೩೫ | ೦೦೮೫೫೪೫ | ೧೭೪೩೬೦೦೦ | ೧೯೩೨ | ೨೧೯೮೭೦೦೦ |
| ೧೯೩೬ | ೦೦೨೭೦೦೦ | ೨೦೫೬೫೦೦೦ | ೧೯೩೩ | ೨೪೭೪೬೦೦೦ |
| | | | ೧೯೩೪ | ೩೪೪೬೭೦೦೦ |
| | | | ೧೯೩೫ | ೩೮೮೮೯೮೫೩ |

## ೧೯೩೦ರಲ್ಲಿ ಬೈಸಿಕಲ್ಲಿನ ಕಾರಖಾನೆಗಳು, ಕೂಲಿಕಾರರು

| | ೫-೯ | ೧೦-೧೪ | ೧೫-೨೯ | ೩೦-೪೯ | ೫೦-೯೯ | ೧೦೦-೧೯೯ | ೨೦೦-೪೪೯ | ಒಟ್ಟು |
|---|---|---|---|---|---|---|---|---|
| ಕಾರಖಾನೆಗಳು | ೧೯೭ | ೬೩ | ೬೯ | ೩೧ | ೧೧ | ೧೦ | ೨ | ೩೮೩ |
| ಕೂಲಿಯವರು | ೧೧೯೪ | ೮೦೪ | ೧೧೬೪ | ೧೩೮೩ | ೮೩೬ | ೧೫೯೮ | ೬೫೭ | ೭೯೩೫ |

## ಕಬ್ಬಿಣ ಸಾಮಾನುಗಳ ಗಿಲಾಯಿ ಕೈಗಾರಿಕೆ

ಯುದ್ಧ ಸುರುವಾದೊಡನೆ ಈ ಗಿಲಾಯಿ ಉದ್ಯಮವನ್ನು ಜರ್ಮನಿ ಆಸ್ಟ್ರೀಲಿಯಾ ದೇಶಗಳು ನಿಲ್ಲಿಸಿದ ಮೇಲೆ, ಜಪಾನ ದೇಶವು ಇದನ್ನು ಕೈಕೊಂಡಿತು. ಪ್ರಗತಿಪರ ರಾಜ್ಯದ ಪರಿಣಾಮವಾಗಿ ಈ ಕೈಗಾರಿಕೆಯೂ ಬೇಗನೆ ಮುಂದುವರಿಯಿತು. ೧೯೧೩ರಲ್ಲಿ ೧೦ ಲಕ್ಷ ಎನ್ನುಗಳ ಗಿಲಾಯಿ ಸಾಮಾನು ತಯಾರಾಯಿತು; ೧೯೧೮ರ ವೇಳೆಗೆ ೬೦ಲಕ್ಷ ಎನ್ನುಗಳಷ್ಟು ಉತ್ಪತ್ತಿಯಾಗಿ, ೪೦ ಲಕ್ಷ ಎನ್ನುಗಳಷ್ಟು ಪದಾರ್ಥಗಳು ಪರದೇಶಗಳಿಗೆ ಕಳಿಸಲ್ಪಟ್ಟವು. ಯುದ್ಧದ ನಂತರ ಅಲ್ಯುಮಿನಿಯಮ್ ಪದಾರ್ಥಗಳು ಪ್ರಚಾರಕ್ಕೆ ಬಂದು ಈ ಗಿಲಾಯಿ ವ್ಯವಸಾಯವು ಕುಗ್ಗಿತು. ಆದರೂ ಇದು ಜಪಾನಿನಲ್ಲಿ ಮುಂದುವರಿಯುತ್ತ ೧೯೨೪ರಲ್ಲಿ ೬೭ ಲಕ್ಷ ಎನ್ನುಗಳ ಪದಾರ್ಥಗಳನ್ನು ಪರದೇಶಕ್ಕೆ ಕಳಿಸಿತು. ಹೀಗೆ ೧೯೩೬, ೩೭ರಲ್ಲಿ ೮೭ ಲಕ್ಷ, ೧ ಕೋಟಿ ೫೦ ಲಕ್ಷ ಎನ್ನುಗಳ ವರೆಗೆ ಮುಟ್ಟಿತು. ೧೯೩೨ರಲ್ಲಿ ೨೮೦೦ ಕೂಲಿಗಾರರಿದ್ದರು; ಅದೇ ೧೯೩೩, ೩೪ ೩೫ರಲ್ಲಿ ೩೮೦೦, ೪೫೦೦, ೫೦೦೦ ಕೂಲಿಕಾರರ ವರೆಗೆ ಬೆಳೆಯುತ್ತ ಬಂದಿತು. ಇಡಿ ಜಪಾನದಲ್ಲಿ ಓಸಾಕಾ, ಟೋಕಿಯೋ, ಕೋಬೆ ಈ ಮೂರು ಸ್ಥಳಗಳಲ್ಲಿ ಮಾತ್ರ ಈ ಉದ್ಯೋಗವು ಸಾಗುತ್ತದೆ. ಮೊದಮೊದಲು ತಪ್ಪಿಗಳಷ್ಟೇ (Pans) ತಯಾರಾಗುತ್ತಿದ್ದುವು. ಈಗ ಬಾನಿ, ಲೋಟ, ಚಮಚೆ, ಕಪ್ಪುಬಸಿಗಳು, ಸಾಬೂನಿನ ಪೆಟ್ಟಿಗೆಗಳು ಮೊದಲಾದವು ತಯಾರಾಗುತ್ತವೆ. The making of the iron plate, enamelliing and baking in the kiln ಹೀಗೆ ಮೂರು ತರಹವಾಗಿ ಇದು ಮಾಡಲ್ಪಡುತ್ತಿದೆ. ಈ ಮೂರೂ ವಿಧಾನಗಳು ಒಂದೇ ಕಾರಖಾನೆಯಲ್ಲಾದರೆ ವೆಚ್ಚವು ಕಡಿಮೆ ತಗಲುವುದಲ್ಲದೆ ಸುಲಭವಾಗು

ತ್ತದೆ. ೫೦ರಿಂದ ೧೦೦ ಕೂಲಿಕಾರರಿದ್ದ ಕಾರಖಾನೆಗಳೇ ಅರ್ಧಕ್ಕಿಂತ ಹೆಚ್ಚಿಗಿರುವವು. ೩೦ ಸಾವಿರ ಎನ್ನು ಭಾಂಡವಲವಿದ್ದ ಕಾರಖಾನೆಗಳೇ ಬಹಳ.

ಈ ಕೈಗಾರಿಕೆಯಲ್ಲಿ ೧೦೦ಕ್ಕೆ ೯೦ರಷ್ಟು ಗಂಡಸರು ದುಡಿಯುತ್ತಾರೆ. ೧೪-೧೬ ವಯಸ್ಸಿನ ಹುಡುಗರೇ ಹೆಚ್ಚು. ಕೆಲಸವೂ ಸುಲಭವಿರುವುದರಿಂದ ಕೂಲಿಯೂ ಕಡಿಮೆಯಿದೆ. ಆದ್ದರಿಂದ ಇದರ ಜೊತೆಗೆ ಕೂಲಿಯವರು ಬೀಡಿ, ಸಿಗರೇಟಿನ ಅಂಗಡಿಯನ್ನಿಟ್ಟು ಇಲ್ಲವೆ ಕಾಗದದ ಪೆಟ್ಟಿಗೆಯನ್ನಾಗಲಿ ಮಾಡಿಕೊಂಡು ಬಾಳುತ್ತಾರೆ. ೨೦೦ ಜನರಿಗಿಂತ ಹೆಚ್ಚಿರುವ ಕಾರಖಾನೆಗಳಲ್ಲಿ ಕಿಲೆನ್ ಬಳಿಯುವುದು. ಸುಡುವುದರಲ್ಲಿ ಕೆಲಸ ಮಾಡುವವರಿಗೆ ೩.೫೦ ಎನ್ನುಗಳೂ ಎನಾಮೆಲ್ ಬಣ್ಣ ಕೊಡುವವರಿಗೆ ೨ ಎನ್ನುಗಳು, ತಗಡು ಎಳೆಯುವವರಿಗೂ ೨-೩ ಎನ್ನುಗಳ ದಿನಗೂಲಿಯು ದೊರಕುವುದು. ಇಂಥ ಕಾರಖಾನೆಗಳ ಒಡೆಯರೆಲ್ಲರೂ ಒಂದಾಗಿ ಗಿಲಾಯಿ ಮಾಡಿದ ಪದಾರ್ಥಗಳನ್ನು ಪರದೇಶಗಳಿಗೆ ಕಳಿಸುವ ಕುರಿತು ಒಂದು ಸಂಘವನ್ನು ಮಾಡಿಕೊಂಡಿದ್ದಾರೆ; ಅವರ ನಿಯಮಗಳಂತೆ ವರ್ತಿಸುತ್ತಿರುವರು.

## ಗಿಲಾಯಿ ಸಾಮಾನುಗಳು ಮತ್ತು ಬೆಲೆಯು

| ವರುಷ | ನಿರ್ಯಾತಿನ ಬೆಲೆ | ವರುಷ | ಪದಾರ್ಥಗಳ ಬೆಲೆ |
|---|---|---|---|
| ೧೯೧೭ | ೨೭೦೩೦೦೦ | ೧೯೧೦ | ೨೪೮೦೦೦ |
| ೧೯೨೭ | ೫೯೩೩೦೦೦ | ೧೯೨೦ | ೬೮೯೩೦೦೦ |
| ೧೯೩೧ | ೬೬೯೮೦೦೦ | ೧೯೩೦ | ೬೫೩೮೦೦೦ |
| ೧೯೩೨ | ೪೧೩೩೦೦೦ | ೧೯೩೧ | ೫೩೪೩೦೦೦ |
| ೧೯೩೩ | ೭೨೮೨೦೦೦ | ೧೯೩೨ | ೮೭೦೩೦೦೦ |
| ೧೯೩೪ | ೭೭೯೨೦೦೦ | ೧೯೩೩ | ೧೨೩೫೮೦೦೦ |
| | | ೧೯೩೪ | ೧೫೧೫೮೦೦೦ |

## ವಿದ್ಯುಚ್ಛಕ್ತಿ

ಜಪಾನ ಸರಕಾರವು ೧೮೯೧ರಲ್ಲಿ 'ಬಿವಾ ಸರೋವರ'ದ ಸಹಾಯದಿಂದ ಎರಡು ೮೦ Kw ಮೋಟಾರುಗಳ ಶಕ್ತಿಯಿಂದ ವಿದ್ಯುಚ್ಛಕ್ತಿಯನ್ನು ತಯಾರಿಸಿ 'ಕಿಯೋಕೋ' ಪಟ್ಟಣದ ಉಪಯೋಗಕ್ಕಾಗಿ ಪ್ರಯೋಗಿಸಿತು. ಮುಂದೆ ೧೮೯೫ರಲ್ಲಿಯೇ ಕಿಯೋಕೋ ರೇಲ್ವೆಯು ಇದರಿಂದಲೇ ನಡೆಯತೊಡಗಿತು. ಸರಕಾರವು ೧೯೦೭ರಲ್ಲಿ ಯಮನಾಶಿ ಪ್ರಾಂತ್ಯದಲ್ಲಿ ನೀರಿನ ಸಹಾಯದಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ ೧೨೦ ಮೈಲು ದೂರವಿರುವ ಟೋಕಿಯೋ ನಗರಕ್ಕೆ ವಿದ್ಯುಚ್ಛಕ್ತಿಯನ್ನು ಒದಗಿಸಿತು. ರಶಿಯಾ-ಜಪಾನನ ಯುದ್ಧದ ಮೊದಲು ಕಲ್ಲಿದ್ದಲಿಯಿಂದ ೪೪೦೦೦, ನೀರಿನ ಸಹಾಯದಿಂದ ೩೭೦೦೦ Kw ವಿದ್ಯುಚ್ಛಕ್ತಿಯು ಉತ್ಪತ್ತಿಯಾಗುತ್ತಿದ್ದಿತು. ಕಲ್ಲಿದ್ದಲಿಯಿಂದ ವಿದ್ಯುಚ್ಛಕ್ತಿಯನ್ನು ತಯಾರಿಸುವದೆಂದರೆ ವೆಚ್ಚವು ಹೆಚ್ಚು ಬರುವದು; ಆದರಿಂದ ನೀರಿನಿಂದಲೇ ಹೆಚ್ಚು ಹೊರಡಿಸಲಾಗಿದೆ. ಇಂದು ಉಗಿಯಂತ್ರಗಳಿಂದಲೂ ವಿದ್ಯುಚ್ಛಕ್ತಿಯನ್ನು ತೆಗೆಯುತ್ತಿದ್ದಾರೆ. ಹಿಂದಿನ ಕಾಲಕ್ಕಿದ್ದ ೧೨೦ ಪೌಂಡು ಉಗಿಯ ಒತ್ತುವಿಕೆಯು ಇಂದು ೧೨೦೦ ಪೌಂಡುಗಳ ಸ್ಥಿತಿಯನ್ನು ಹೊಂದಿದೆ. ವಿದ್ಯುಚ್ಛಕ್ತಿಯನ್ನು ತೆಗೆಯಲು ಕಡಿಮೆ ವೆಚ್ಚವು ತಗಲುತ್ತದೆ. ಕಾಗದ ಕಾರಖಾನೆಯಲ್ಲಿ ಮರದ ತಿರಳ (Pulp) ತಯಾರಿಕೆಗೆ ವಿದ್ಯುಚ್ಛಕ್ತಿಯು ಬೇಕಾದರೆ ಕಾಗದಗಳನ್ನು ಒಣಗಿಸಲು ಉಗಿಯೂ ಅವಶ್ಯವಿದೆ. ಇಲ್ಲಿಯ ಕಾರಖಾನೆಗಳು ಸ್ವಲ್ಪ ವೆಚ್ಚದಿಂದ ವಿದ್ಯುಚ್ಛಕ್ತಿಯನ್ನು ತಯಾರಿಸಿ ಕಾರ್ಯಸಾಗಿಸುತ್ತವೆ.

ಇಲ್ಲಿ ವಿದ್ಯುಚ್ಛಕ್ತಿಯ ಆಡಳಿತವು ಸಾರ್ವಜನಿಕ ಸಂಸ್ಥೆಗಳ ಕೈ ಸೇರಿದೆ. ಸರಕಾರವು ಇದಕ್ಕೂ ಸುಲಭ ಬೆಲೆಯಿಂದ ವಿದ್ಯುಚ್ಛಕ್ತಿಯನ್ನು ಕೊಡಬೇಕೆಂದು ಹವಣಿಸುತ್ತಿದ್ದಾರೆ. ವಿದ್ಯುಚ್ಛಕ್ತಿಯು ಪ್ರವೇಶಿಸದ ಒಂದು ಮನೆಯಾದರೂ ಜಪಾನದಲ್ಲಿರುವದಿಲ್ಲ. ೧೯೩೫ರಲ್ಲಿ ಹಂಚಲಾದ ೪೨೪೭೭೮೭೮ ವಿದ್ಯುಚ್ಛಕ್ತಿಯ ದೀಪಗಳಲ್ಲಿ ನೂರಕ್ಕೆ ೫೫ ಭಾಗದಷ್ಟು ೧೨೭ ಪಟ್ಟಣಗಳಲ್ಲಿಯೇ ನೇಕರಿಸಲ್ಪಟ್ಟಿತು. ಹಳ್ಳಿಗಳಲ್ಲಿಯ

ಪ್ರತಿಯೊಂದು ಮನೆಯಲ್ಲಿಯೂ ೫ ದೀಪಗಳು ಉಪಯೋಗಿಸಲ್ಪಡುತ್ತಿವೆ ಯೆಂದು ಕಂಡುಬಂದಿದೆ. ಕೈಗಾರಿಕೆಯು ಮುಂದುವರಿದಂತೆ ಈ ವಿದ್ಯುಚ್ಛಕ್ತಿಯು ಬೆಳವಣಿಗೆಯಾಗೇ ಆಗುವುದು. ಈ ರೀತಿಯಲ್ಲಿ ಈ ವ್ಯವಸಾಯವು ಊರ್ಜಿತಾವಸ್ಥೆಯನ್ನು ಪಡೆದಿದೆ.

## ಯಂತ್ರ ನಿರ್ಮಾಣ ವ್ಯವಸಾಯ

೧೮೭೩ರಲ್ಲಿ ವಿಯೆನ್ ಪಟ್ಟಣದಲ್ಲಾದ ಅಂತರ್ರಾಷ್ಟ್ರೀಯ ವಸ್ತು ಪ್ರದರ್ಶನದಲ್ಲಿ ಜಪಾನ ಸರಕಾರವು ಮೊದಲ ಬಾರಿಗೆ ಹೊಸ ತರದ ಯಂತ್ರಗಳನ್ನು ಕೊಂಡುಕೊಂಡಿತು. ೧೮೭೯ರಲ್ಲಿ ಪಾಶ್ಚಿಮಾತ್ಯರಂತೆ ಯಂತ್ರನಿರ್ಮಾಣ ಖಾತೆಯನ್ನೇರ್ಪಡಿಸಿತು. ಮುಂದೆ ಪ್ರಗತಿಯು ಹೆಚ್ಚಿದಂತೆ ಹಡಗು ಕಟ್ಟುವ, ರೇಲ್ವೆಗೆ ಸಂಬಂಧಪಟ್ಟ ಸಾಮಾನುಗಳ ನಿರ್ಮಿತಿಯಲ್ಲಿಯೂ ನಿಪುಣತೆಯನ್ನು ಪಡೆಯಿತು. ೧೮೯೩ರಲ್ಲಿ ೧೩೦೦ ಅಶ್ವಬಲದ ಉಗಿಯಂತ್ರ ನಿರ್ಮಾಣಕ್ಕೆ ತೊಡಗಿ ೧೮೯೬ರಲ್ಲಿ ಪೂರ್ತಿಗೊಳಿಸಿತು. ಈ ಯಂತ್ರವು ಅವ್ಯಾಹತವಾಗಿ ೩೦ ವರುಷ ಕೆಲಸವನ್ನು ಕೊಟ್ಟಿತು. ಜಪಾನದ 'ತೋಯೊಡಾ' ಹತ್ತಿ ಕಾರಖಾನೆಯು ಗ್ರೇಟ ಬ್ರಿಟನ್ನದಲ್ಲಿಯೂ ಒಟ್ಟಿ ತಯಾರಿಸುತ್ತಲಿದೆ. ಕೆಲವೊಂದು ವರುಷ ವಿದ್ಯುಚ್ಛಕ್ತಿಗೆ ಬೇಕಾಗುವ ಸರಕುಗಳನ್ನು ಜಪಾನವು ಅಮೇರಿಕಾ, ಜರ್ಮನಿಯಿಂದ ಪಡೆಯುತ್ತಿದ್ದಿತು. ಈಗ ಆ ಕಾಲವು ಗತಿಸಿ, ಜಪಾನವೇ ಆ ಸಾಮಾನುಗಳನ್ನು ಪೂರೈಸುತ್ತಲಿದೆ. ಇನ್ನು ಕೆಲವು ವರುಷಗಳಲ್ಲಿ ಸಮಗ್ರ ಏಶಿಯಾಖಂಡಕ್ಕೆ ಬೇಕಾಗುವ ಯಾಂತ್ರಿಕ ಸಾಮಗ್ರಿಗಳನ್ನು ಒದಗಿಸಿಕೊಡಬಹುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಜಪಾನಿನಲ್ಲಿ ಲೋಹವು ದೊರೆಯುದ್ದರಿಂದ ತಯಾರಾಗುವ ಯಂತ್ರಗಳ ಬೆಲೆಯು ಸ್ವಲ್ಪ ಹೆಚ್ಚೆನಿಸದಿರದು. ಅಂಥ ಅನುಕೂಲತೆಯು ದೊರೆತರೆ ಮಾತ್ರ ಜಪಾನವು ಮಿಕ್ಕ ಎಲ್ಲ ರಾಷ್ಟ್ರಗಳನ್ನು ಹಿಂದೆ ಹಾಕದೆ ಬಿಡಲಾರದು. ಕೆಳಗೆ ಕಾಣಿಸಿದ ಅಂಕಿಗಳನ್ನು ನೋಡಿದರೆ ಇವರ ಯಾಂತ್ರಿಕ ನಿರ್ಮಿತಿಯ ಫಲವು ಒಡೆದು ಕಾಣುವುದು.

## ಯಂತ್ರನಿರ್ಮಾಣ ವ್ಯವಸಾಯದ ಬೆಳೆವಣಿಗೆ

| ವರುಷ | ಕಾರಖಾನೆಗಳ ಸಂ. | ಕೆಲಸಗಾರರ ಸಂ. | ಉತ್ಪತ್ತಿಯ ಬೆಲೆ |
|---|---|---|---|
| ೧೯೧೪ | ೩೮೮ | ೮೦೮೬೨ | ೧೧೦೯೦೬ |
| ೧೯೨೬ | ೪೪೨೯ | ೨೭೩೨೬೯ | ೫೩೮೯೧೭ |
| ೧೯೩೦ | ೫೬೦೪ | ೨೦೫೩೦೮ | ೭೧೫೬೮೨ |
| ೧೯೩೧ | ೬೪೭೮ | — | ೪೪೩೩೪೦ |
| ೧೯೩೨ | ೬೭೩೮ | ೨೩೦೮೯೬ | ೫೪೩೮೪೨ |
| ೧೯೩೩ | ೭೮೫೦ | ೨೪೯೩೨೩ | ೮೮೮೧೯೫ |
| ೧೯೩೪ | ೯೧೮೧ | ೩೧೪೬೬೯ | ೧೧೫೯೧೬೭ |
| ೧೯೩೫ | ೧೦೩೫೨ | ೩೬೭೨೬೩ | ೧೪೬೨೫೩೯ |

ಯಾವದೇ ತರದ ಕೈಗಾರಿಕೆಯು ಮುಂದುವರಿಯಬೇಕಾದಲ್ಲಿ ಅದು ವಿವಿಧ ಲೋಹಗಳ ಉಗಮಸ್ಥಾನವಿರಬೇಕು; ಅಂದರೆ ಎಷ್ಟು ಸುಲಭವಾಗುವದು. ಆದರೂ ಎಲ್ಲ ಅನುಕೂಲತೆಗಳಾದರೂ ಒಂದೇ ಸ್ಥಳದಲ್ಲಿ ದೊರೆಯುವ ಬಗೆಯೆಂತು? ಹೀಗಿದ್ದರೂ ಪ್ರಗತಿಪರ ರಾಷ್ಟ್ರಗಳೆಲ್ಲವೂ ಏನಾದರೊಂದು ಅನುಕೂಲವನ್ನು ಪಡೆದು ತನ್ನ ತನ್ನ ಹೆಜ್ಜೆಯನ್ನು ಮುಂದಿಡುತ್ತಲೇ ಇದೆ. ಇಲ್ಲಿ ಹುಟ್ಟುವ ಕಬ್ಬಿಣದ ಬೀಡು, ಕಲ್ಲಿದ್ದಲು, ಉಣ್ಣೆ, ರಬ್ಬರ್, ಉಕ್ಕು ಮೊದಲಾದ ಖಣಿ ಸಾಮಾನುಗಳ ಹಾಗೂ ತಯಾರಾದ ಮಾಲುಗಳ ಲೆಕ್ಕವನ್ನು ನೋಡಿದರೆ ಆಶ್ಚರ್ಯವೆನಿಸುವಂತಿದೆ. ಪರದೇಶಗಳಿಂದ ತರಿಸಿಕೊಳ್ಳುವದು, ಕಳಿಸಿಕೊಡುವದು ಜಪಾನಿನಲ್ಲಿ ಎಡೆಬಿಡದೆ ಸಾಗುತ್ತಲೇ ಇದೆ. ಇಷ್ಟು ಪ್ರಗತಿಪರ ರಾಷ್ಟ್ರವನ್ನು ನಾವು ಸೂಕ್ಷ್ಮವಾಗಿ ಕೂಲಂಕಷವಾಗಿ ನಿರೀಕ್ಷಿಸಿದರೆ ಅದರ ಮಹತ್ವ, ವೈಭವ, ಜಾಣ್ಮೆ ಮೊದಲಾದವು ಒಮ್ಮೆಲೆ ಕಂಡುಬರದೆ ಇರವು. ಉಕ್ಕು, ಕಬ್ಬಿಣ ಸಾಮಾನುಗಳಲ್ಲಿ ಪ್ರಸಿದ್ಧವಾದ ಶೆಫೀಲ್ಡವು ಸ್ವೀಡನ್ನದಿಂದ ನಿರ್ಯಾತವಾಗುವ ಸರಕಿನ ಮೇಲೆ ನಿಂತಿರುತ್ತದೆ. ಅದೇ ಜಪಾನಿಗೆ ಚೀನಾ, ಮಂಚೂರಿಯಾಗಳಿಂದ ದೊರೆತರೆ ಜಪಾನದ ಮೂಗು ಮೇಲಾಗುವದೆಂದು ನ್ಯಾಯದಿಂದ ಹೇಳಬಹುದು. ಕೈಗಾರಿಕೆಯಲ್ಲಿ

ಮುಂದರಿದ ಅಮೇರಿಕೆಯೂ ಕೂಡ ಪರದೇಶಗಳಿಂದ ನಿರ್ಯಾತವಾಗುವ ಎಷ್ಟೋ ಮಾಲಿನ ಸಹಾಯವನ್ನು ಪಡೆಯುತ್ತಲಿದೆ. ಇದು ಲೋಹ ಸಂಪತ್ತಿನ ತವರೂರಾದರೂ ಅವುಗಳನ್ನು ಸಾಗಿಸುವ ವೆಚ್ಚವು ಬಹಳ ತಗಲುವುದು. ಚೀನಾ, ಮಂಚೂರಿಯಾ ದೇಶಗಳು ಜಪಾನಿಗೆ ನೆರೆ-ಹೊರೆಯವಾಗಿದ್ದರಿಂದ ವೆಚ್ಚವು ಕಡಿಮೆ ಬರುವುದು. ಮೇಲಾಗಿ ಸಾಕ್ಷಾತ್ ಸರಕಾರವೇ ಇಂಥ ಕೈಗಾರಿಕೆಗಳಿಗೆ ಬೇಕಾದಷ್ಟು ಬೆಂಬಲವನ್ನು ಕೊಡುತ್ತಿರುವುದರಿಂದ ಈ ದೇಶದಲ್ಲಿ ಕೈಗಾರಿಕೆಗಳು ಊರ್ಜಿತಾವಸ್ಥೆಯನ್ನು ಮುಯತ್ರಯಾಸವಿಲ್ಲದೆ—ಪಡೆದಿರುತ್ತವೆ.

## ರಸಾಯನ ದ್ರವ್ಯ ವ್ಯವಸಾಯದ ಪ್ರಗತಿ

ಹೊಸ ಸರಕಾರವು ಈ ರಸಾಯನದ ವ್ಯವಸಾಯಕ್ಕೂ ತಕ್ಕಷ್ಟು ಪ್ರೋತ್ಸಾಹವನ್ನಿತ್ತು ಮುಂದುವರಿಯಲು ಮಾರ್ಗಮಾಡಿಕೊಟ್ಟಿತು. ಸಾಬೂನು, ಸಿಮೆಂಟ್, ಗಾಜು, ಕಾಗದ ಮತ್ತು ಇನ್ನಿತರ ರಸಾಯನಿಕ ಕೈಗಾರಿಕೆಯ ಸಂಬಂಧವಾಗಿ ಒಂದು ಪ್ರಯೋಗಶಾಲೆಯನ್ನೇರ್ಪಡಿಸಿತು. ಅಲ್ಲಿ ತರುಣರು ಅಭ್ಯಸಿಸುವಂತೆ ಅನುಕೂಲತೆಯೊದಗಿಸಲ್ಪಟ್ಟಿತು. ಈ ಕಾರಖಾನೆಯಲ್ಲಿ ಮೊದಲ ಸಲನೆ 'ಗಂಧಕದ ಹುಳಿ'ಯು ತಯಾರಿಸಲ್ಪಟ್ಟಿತು. ೧೮೭೬-೭೯ರಲ್ಲಿ ಬೀರು ಮತ್ತು ಗೋದಿ ಹಿಟ್ಟು ತಯಾರಿಸುವ ಕಾರಖಾನೆಯುಂಟಾದುವು. ೧೮೮೫ರಲ್ಲಿ ಹೊಸ ಪದ್ಧತಿಯಲ್ಲಿ ಓಸಾಕಾ ನಗರದಲ್ಲಿ ಟಂಕಸಾಲೆಯು ಸ್ಥಾಪಿಸಲ್ಪಟ್ಟಿತು. ಅಲ್ಲಿ ಲೋಹಗಳ ನಾಣ್ಯ, ಕಾಗದದ ನಾಣ್ಯಗಳು ತಯಾರಾಗತೊಡಗಿದುವು. ೧೮೭೬ರಲ್ಲಿ ಕಡ್ಡಿಪೆಟ್ಟಿಗೆಯ ಕಾರಖಾನೆಯುಂಟಾಯಿತು; ಮುಂದೆ ನಾಲ್ಕೇ ವರುಷಗಳಲ್ಲಿ ಪರದೇಶದ ಕಡ್ಡಿಪೆಟ್ಟಿಗೆಗಳು ಹೇಳಹೆಸರಿಲ್ಲದಂತಾದುವು. ೧೮೮೩ರ ವೇಳೆಗೆ ಜಪಾನಿನಲ್ಲಿ ೨೦ ಲಕ್ಷ ಎನ್ನು ಭಾಂಡವಲವುಳ್ಳ ೧೪೩ ಕಾರಖಾನೆಗಳು ತಲೆದೋರಿ ವಿವಿಧ ರಸಾಯನ ದ್ರವ್ಯದ ಉತ್ಪತ್ತಿಯಲ್ಲಿ ತೊಡಗಿದುವು. ಇತ್ತ ಸರಕಾರವೂ ಪರದೇಶಗಳಿಂದ ಬರುವ ರಸಾಯನ ದ್ರವ್ಯಗಳ ಮೇಲೆ ವಿಪರೀತವಾದ ಕರವನ್ನು ಹೇರಿ, ಸ್ವದೇಶದ ಹುಟ್ಟುವಳಿಗೆ ನೆರವಾಯಿತು. ೧೯೦೭ರ ಹೊತ್ತಿಗೆ ಈ ವ್ಯವಸಾಯದ ೨೪೩೧

ಕಾರಖಾನೆಗಳು ಕಾರ್ಯದಲ್ಲಿ ತೊಡಗಿದವು. ಇವುಗಳಲ್ಲಿ ೯೬೦೦೦ ಕೂಲಿಕಾರರು ದುಡಿಯುತ್ತಿದ್ದರು. ೧೯೩೩ರಲ್ಲಿ ೧೬೦ ಕೋಟಿ ಎನ್ನು ಭಾಂಡವಲದ ೪೦೧೩ ಕಾರಖಾನೆಗಳು ವಿವಿಧ ರಸಾಯನ ದ್ರವ್ಯಗಳನ್ನು ತಯಾರಿಸಲಾರಂಭಿಸಿದುವು. ಇದರ ಜೊತೆಗೆ ೨೬೩೧ ಕಂಪನಿಗಳೂ ಸಹ ಈ ವ್ಯವಸಾಯವನ್ನು ಕೈಕೊಂಡವು. ಹೀಗೆ ಅದ್ಭುತ ಬೆಳವಣಿಗೆಯಾಗಿ ಇವುಗಳಲ್ಲಿ ಒಟ್ಟು ೧೬೩೦೦೦ ಕೂಲಿಕಾರರು ಕೆಲಸ ಮಾಡುತ್ತಿದ್ದಾರೆ.

ರಸಾಯನ ವ್ಯವಸಾಯವು ಬಹು ಕಡುತರವಾದುದು; ಹುಂಬತನದಿಂದ ಸಾಗಲಾರದು. ಜಪಾನಿಯರು ಈ ವಿದ್ಯೆಯನ್ನು ಪಾಶ್ಚಿಮಾತ್ಯರಿಂದ ಕಲಿತುಕೊಂಡು, ಜಗತ್ತಿನಲ್ಲಿ ಈಗ ಎರಡನೆಯ ಸ್ಥಾನವನ್ನು ಪಡೆದಿದ್ದಾರೆ. ಪ್ರಥಮ ಸ್ಥಾನದಲ್ಲಿದ್ದ ಅಮೇರಿಕೆಯನ್ನು ಮಾತ್ರ ಇನ್ನೂ ಸೋಲಿಸುವುದಾಗಿಲ್ಲ. ಕೆಲಕೆಲವು ಪದಾರ್ಥ ನಿರ್ಮಿತಿಯಲ್ಲಿ ಕೆಲವು ದೇಶದ ಹೆಸರುಗಳು ಮುಂದಿದ್ದರೂ ಎಲ್ಲ ತರಹದ ಉತ್ಪತ್ತಿಯಲ್ಲಿ ಜಪಾನದ ನಂಬರು ಎರಡನೆಯದೆಂಬುದರಲ್ಲಿ ಸಂಶಯವಿಲ್ಲ. ರಸಾಯನ ಕೈಗಾರಿಕೆಗಳಲ್ಲಿ ಪ್ರಮುಖವಾದ ಕೆಲವು ವ್ಯವಸಾಯಗಳ ವಿವರಣೆಯನ್ನು ಪ್ರತ್ಯೇಕವಾಗಿ ವಾಚಕರ ಅವಗಾಹನೆಗಾಗಿ ಕೊಟ್ಟಿದೆ:—

**ಸಿಲೋಲಾಯಿಡ್** (Celluliod):—ಕರ್ಪೂರದ ಸಹಾಯದಿಂದ ತಯಾರಾಗುವ ಈ ಉದ್ಯಮವು ಮಹಾಯುದ್ಧದ ನಂತರವೇ ಮುಂದೆ ಬರತೊಡಗಿದೆ. ಆ ಕಾಲದಲ್ಲಿ ಜಪಾನಿಯರು ಈ ಉದ್ಯೋಗದಲ್ಲಿ ತೊಡಗಿ ಮಿತಿಮೀರಿ ಲಾಭವನ್ನು ಪಡೆದರು. ಶಾಂತಿಸ್ಥಾಪನೆಯಾದ ಮೇಲೆ ಪಾಶ್ಚಿಮಾತ್ಯ ದೇಶಗಳೂ ಭರದಿಂದ ಈ ಉದ್ಯೋಗವನ್ನು ಸಾಗಿಸಿದ್ದರಿಂದ ೧೯೩೧ರ ವರೆಗೆ ಇವರ ಈ ಉದ್ಯೋಗವು ಅಷ್ಟೊಂದು ಲಾಭದಾಯಕವಾಗಲಿಲ್ಲ. ಮುಂದೆ ನಾಣ್ಯದ ಬೆಲೆಯ ಇಳಿತದಿಂದ ಮತ್ತೆ ಜಪಾನಿಯರ ಈ ಉದ್ಯೋಗವು ಇಮ್ಮಡಿಯಾಗಿ ಬೆಳೆಯಲವಕಾಶವಾಯಿತು. ಇಲ್ಲಿಯ ಸಿಲೋಲೈಯಿಡ್ ಸಾಮಾನುಗಳು ಮುಖ್ಯವಾಗಿ ಇಂಗ್ಲಂಡ, ಅಮೇರಿಕಾ, ಆಸ್ಟ್ರೇಲಿಯಾ ದೇಶಗಳಿಗೆ ಹೊತ್ತು ಹೋಗುತ್ತಲಿರುವುದು. ಜರ್ಮನರ ಪದಾರ್ಥಗಳ ಪೈಪೋಟಿಯ ಮೇಲೆಯೂ ಸಹ ಜಪಾನದ ಈ

ಸಾಮಾನುಗಳು ಮಾರಲ್ಪಡುತ್ತಿವೆ. ಎಲ್ಲಿಯ ವರೆಗೆ ನಾಣ್ಯದ ಇಳಿತ ವಿದೆಯೋ ಅಲ್ಲಿಯ ವರೆಗೆ ಮಾತ್ರ ಜಪಾನದ ಈ ಉದ್ಯೋಗವು ಭರ ಭರಾಟೆಯಿಂದ ಸಾಗತಕ್ಕದ್ದೆಂದು ಸಾರಿಹೇಳಬಹುದು. ೧೯೩೫ರಲ್ಲಿ ಉಂಟಾದ ೩ತ್ತಿ ಕೋಟಿ ಎನ್ನು ಸಿಲೋಲ್ಶೈಯಿಡ್ ಬೆಲೆಬಾಳುವ ಪದಾರ್ಥ ಗಳಲ್ಲಿ ಎರಡು ಕೋಟಿ ಎನ್ನುಗಳಷ್ಟು ಪರದೇಶಗಳಿಗೆ ಹೋಯಿತು. "ದಿ ದೈನಿಪೊನ್ ಸಿಲೋಲ್ಶೈಯಿಡ್ ಕಂಪನಿ"ಯೊಂದರಲ್ಲಿಯೇ ಇಡೀ ಜಪಾನಿನ ಸಿಲೋಲ್ಶೈಯಿಡ್ ಉತ್ಪತ್ತಿಯ ೩/೪ ಭಾಗವು ತಯಾರಾಗುತ್ತದೆ. ಉಳಿದ ೨೫ ಭಾಗವು ೧೦ ಕಾರಖಾನೆಗಳಲ್ಲಿ ಹೊರಡುತ್ತದೆ. ಈಗ ಈ ದೈನಿಪೊನ್ ಸಿಲೋಲ್ಶೈಯಿಡ್ ಕಂಪನಿಯು ೨೦ ಲಕ್ಷ ಎನ್ನು ಭಾಂಡವಲವನ್ನು ಹಾಕಿ ಫಿಲ್ಮ್ ತಯಾರಿಸುವ ಕಾರಖಾನೆಯೊಂದನ್ನು ಸ್ಥಾಪಿಸಿದೆ. ಅಲ್ಲಿ ತಯಾರಾಗುವ ಮಾಲಿನ ಫಲಾಫಲವು ಈಗ ಗೊತ್ತಾಗುವಂತಿಲ್ಲ; ಮುಂದೆ ತಿಳಿಯಬಹುದು.

**ಗಾಜು** (Glass):—ಗಾಜು ನಿರ್ಮಾಣವು ಜಪಾನಿನಲ್ಲಿ ೭ನೇ ಶತಮಾನದಿಂದ ಸಾಗುತ್ತ ಬಂದಿದೆಯೆಂಬ ಚಾರಿತ್ರಿಕ ಉದಾಹರಣೆಗಳಿಂದ ಕಂಡುಬಂದಿದೆ. ೧೯ನೇ ಶತಮಾನದ ಕೊನೆಯಲ್ಲಿ ಮೇಜೀ ಸರಕಾರವು ಗಾಜಿನ ಒಂದು ಮಾದರಿಯ ಕಾರಖಾನೆಯನ್ನು ಸಾರ್ವಜನಿಕರ ಮನಸ್ಸು ಈ ಉದ್ಯಮದಲ್ಲಿ ತೊಡಗಲೆಂದು ಸ್ಥಾಪಿಸಿತು. ಬೇರೆ ಕೈಗಾರಿಕೆಗಳು ಇಲ್ಲಿ ಬೆಳೆದ ಹಾಗೆ ಇದೂ ಬೇಗನೆ ಬೇರು ಬಿಟ್ಟಿತು. ೧೯೩೧ ರಲ್ಲಿ ಗಾಜು ಉತ್ಪತ್ತಿಯ ನಿರ್ಯಾತದ ೭೦ ಪಟ್ಟು ಹೆಚ್ಚಾಯಿತು. ೧೯೩೩ರಲ್ಲಿ ಗಾಜು ಪದಾರ್ಥಗಳ ಆಯಾತವು ೭೪೪೨೦೦೦ ಎನ್ನುಗಳಿದ್ದರೆ, ೧೯೩೬ರಲ್ಲಿ ಅದೇ ೩೪೪೫೦೦೦ ಎನ್ನುಗಳಿಗೆ ಇಳಿಯಿತು. ಇದರಂತೆ ೧೯೩೩ರಲ್ಲಿದ್ದ ಗಾಜಿನ ನಿರ್ಯಾತವು ೧೫೩೨೬೬೧ ಎನ್ನುಗಳ ಬೆಲೆಯಾಯಿತು. ೧೯೩೬ರಲ್ಲಿ ೨೫೬೬೨೦೦೦ ಎನ್ನುಗಳ ಬೆಲೆಯನ್ನು ಮುಟ್ಟಿತು. ಇದರ ಮೇಲಿಂದ ಕಂಡುಬರುವದೇನಂದರೆ—ಜಪಾನು ದೇಶದ ಗಾಜಿನ ಸಾಮಾನುಗಳು ತೀರ ಕಡಿಮೆ ಬೆಲೆಗೆ ಎಲ್ಲ ದೇಶಗಳಲ್ಲಿಯೂ ಮಾರಲು ದೊರೆಯುತ್ತವೆಂಬ ಮಾತನ್ನು ಹೇಳುವ ಕಾರಣವೇ ಇಲ್ಲ. ವೈಜ್ಞಾನಿಕ ವೈದ್ಯಕೀಯ ಸಂಬಂಧಪಟ್ಟ ಗಾಜಿನ ಸಾಮಾನುಗಳು ೧೪೫೦ರಿಂದ

ತಯಾರಿಸಲ್ಪಡುತ್ತಿವೆ. ೧೬೦೦ ರಲ್ಲಿಯೇ ಇವರು ಕನ್ನಡಕದ ಗಾಜನ್ನು ತಯಾರಿಸುತ್ತಿದ್ದರೂ ೧೮೭೩ರಲ್ಲಿ ಮಾತ್ರ ಹೊಸಪದ್ಧತಿಯನ್ನು ಅನುಸರಿಸಿದರು. ನೂರರಲ್ಲಿ ೬೦ ವಿದ್ಯಾರ್ಥಿಗಳು ಬಹುತೇಕವಾಗಿ ಕನ್ನಡಕವನ್ನು ಧರಿಸಿರುವುದರಿಂದ ಬೇಡಿಕೆಯ ಪ್ರಮಾಣವು ಹೆಚ್ಚಿಗಿರುವುದು. ಇವರು ಮೇಜಿನ ಮೇಲೆ ಹಾಕುವ, ರಸಾಯನಕ್ಕೆ ಬೇಕಾಗುವ ಗಾಜುಗಳನ್ನು ತಯಾರಿಸಿ ಅಗ್ಗ ಬೆಲೆಗೆ ಮಾರುವಷ್ಟು ಶಕ್ತರಾಗಿದ್ದಾರೆ.

**ಸಿಮೆಂಟ್:—** ೧೮೭೧ರಲ್ಲಿ ಸರಕಾರವು ಟೋಕಿಯೋ ನಗರದಲ್ಲಿ ಮೊಟ್ಟಮೊದಲಿಗೆ ಒಂದು ಸಿಮೆಂಟಿನ ಕಾರಖಾನೆಯನ್ನು ಸ್ಥಾಪಿಸಿದರೂ ಮುಂದೆ ಹತ್ತೇ ವರುಷಗಳೊಳಗಾಗಿ ವರುಷಕ್ಕೆ ಮೂರು ಲಕ್ಷ ಬ್ಯಾರಲ್ಸ (barels) ಸಿಮೆಂಟು ಇಲ್ಲಿ ತಯಾರಾಗುತ್ತಿತ್ತು. ಮಹಾಯುದ್ಧದ ನಂತರವೆ ಈ ಸಿಮೆಂಟು ಕೈಗಾರಿಕೆಗೆ ಬಹು ಕಳೆಯೇರಿತು. ೧೯೨೭ರ ಹೊತ್ತಿಗೆ ೮॥ ಕೋಟಿ ಎನ್ನುಗಳ ಭಾಂಡವಲವುಳ್ಳ ೩೪ ಕಾರಖಾನೆಗಳು ತಲೆದೋರಿದುವು. ಅವುಗಳಲ್ಲಿ ೧೮ ಕೋಟಿ ಬ್ಯಾರಲ್ಸಗಳ ಸಿಮೆಂಟು ಉತ್ಪತ್ತಿಯಾಗತೊಡಗಿತು. ಸ್ವದೇಶದಲ್ಲಿ ಸಿಮೆಂಟಿಗೆ ಗಿರಾಕಿಗಳು ದಿನಂಪ್ರತಿ ಹೆಚ್ಚಾಗುವುದರಿಂದ ಈ ಕೈಗಾರಿಕೆಯು ಹೆಚ್ಚಳವು ಕಲ್ಪನಾತೀತವಾಗಿ ಬೆಳೆಯುತ್ತಲಿದೆ.

**ಪಿಂಗಾಣಿ ಕೈಗಾರಿಕೆ:—** ಮಣ್ಣಿನಿಂದ ಗಡಿಗೆ ಮಡಿಕೆಗಳನ್ನು ತಯಾರಿಸುವ ವ್ಯವಸಾಯವು ಪುರಾತನ ಕಾಲದಿಂದ ನಡೆದುಬಂದಿದೆ. ಅವುಗಳನ್ನು ಸಹ ಯಾಂತ್ರಿಕ ಸಹಾಯದಿಂದ ತಯಾರಿಸುತ್ತಾರೆ. ಈ ಕುಂಬಾರಿಕೆಯ ವ್ಯವಸಾಯದಿಂದ ಜಪಾನ ದೇಶವು ಜಗತ್ತಿನಲ್ಲಿ ಒಂದು ಪ್ರಮುಖ ಸ್ಥಾನವನ್ನು ಆಕ್ರಮಿಸಿದೆ. ಈಗ ವರುಷಕ್ಕೆ ೮ ಕೋಟಿ ಎನ್ನು ಬೆಲೆ ಬಾಳುವ ಗಡಿಗೆ ಮಡಿಕೆಗಳು ತಯಾರಾಗಿ ಅರ್ಧದಷ್ಟು ಪರದೇಶಗಳಿಗೆ ಹೊರಟುಹೋಗುತ್ತಿದೆ. ಮಣ್ಣಿನ ಪಾತ್ರೆಗಳು ಸುಂದರವಾದವೂ ನಾನಾ ಜಾತಿಯವೂ ಮೋಹಕವಾದ ಬಣ್ಣದಿಂದಲಂಕೃತವಾದವುಗಳಿರುವುದರಿಂದ ಪ್ರತಿಯೊಬ್ಬನಿಗೆ ಕೊಂಡುಕೊಳ್ಳಬೇಕೆಂಬ ಅಭಿಲಾಷೆಯು ಸಹಜವಾಗಿ ಮೂಡುವುದು. ಅಚಿ ಪ್ರಾಂತದಲ್ಲಿರುವ ನಗೋೇ, ಸೇತೋ

ಇವೆರಡು ಊರುಗಳಲ್ಲಿ ಮಣ್ಣಿನ ಪಾತ್ರೆಗಳು ಬಹಳಷ್ಟು ತಯಾರಾಗು ತ್ತವೆ. ಈ ಸಾಮಾನುಗಳಿಗೆ 'ಸೇತೋ-ಮನೋ' (seto-mono) ಎಂದು ಕರೆಯುವರು. ನಗೋಯ ಕೇಂದ್ರವು ಜಗತ್ತಿನಲ್ಲಿಯೇ ಅತಿ ದೊಡ್ಡ ದೆಂದು ಗಣಿಸಲ್ಪಟ್ಟಿದೆ. ೧೯೩೫ರ ಕೊನೆಗೆ ೬೬೨೪ ಕಾರಖಾನೆಗಳಿದ್ದು ಅವುಗಳಲ್ಲಿ ೬೧೧೩೫ ಕೂಲಿಕಾರರು ಕೆಲಸಮಾಡುತ್ತಿದ್ದರು. ಮಣ್ಣಿ ನಿಂದಾಗುವ ಯಾವತ್ತು ತರಹದ ಸಾಮಾನುಗಳು ಇಲ್ಲಿ ಹುಟ್ಟುತ್ತವೆ. ಈ ಸಾಮಾನುಗಳನ್ನು ತಯಾರಿಸುವ ಇವರ ಕೈವಾಡವು ಬಲು ಜನರಿಗೆ ಚಮತ್ಕಾರವನ್ನುಂಟುಮಾಡುತ್ತದೆ. ಜಪಾನಿಯರು ಮಣ್ಣಿನ ಪಾತ್ರೆ ಗಳನ್ನು ಮೆಚ್ಚುತ್ತಾರೆ; ಮನೆಗಳಲ್ಲಿ ಹೆಚ್ಚಾಗಿ ಅವುಗಳನ್ನು ಸಂಗ್ರಹಿಸು ತ್ತಾರೆ.

ಅಮೇರಿಕೆಯು ಜಪಾನಿನಿಂದ ವರುಷಕ್ಕೆ ೧॥ ಕೋಟಿ ಎನ್ನುಗಳಷ್ಟು ಮಣ್ಣಿನ ಸಾಮಾನುಗಳನ್ನು ತರಿಸಿಕೊಳ್ಳುತ್ತದೆ. ಇದರಂತೆ ಮೂವತ್ತು ಲಕ್ಷ ಎನ್ನುಗಳ ಸಾಮಾನುಗಳು ಭಾರತಕ್ಕೂ ಬರುತ್ತಿವೆ. ಇವರ ಆಟಿ ಗೆಯ ಸಾಮಾನುಗಳು, ಗೊಂಬೆ, ಇಮಾರತಿನ ಸಾಮಾನು ಇವೇ ಮೊದ ಲಾದ ಪದಾರ್ಥಗಳು ಪ್ರಪಂಚದ ಜನರನ್ನು ಬೆರಗುಗೊಳಿಸಿವೆ.

**ರಬ್ಬರು:—** ನವನಾಗರಿಕತೆಯು ಬೆಳೆದಂತೆ ಅದಕ್ಕೆ ಪರಿಪೋಷಕ ವಾದ ಸಾಮಾನುಗಳೂ ಹುಟ್ಟಿದುವು. ಅಂಥವುಗಳಲ್ಲಿ ಈ ರಬ್ಬರು ಒಂದು. ಮಾನವನ ಹಿತಕ್ಕೆ ಇದು ಅನೇಕ ಬಗೆಯಿಂದ ಉಪಕಾರ ಮಾಡುತ್ತಿದೆ. ರಬ್ಬರಿನ ಪೂರ್ಣ ಉಪಯೋಗವಾಗುತ್ತಿರುವುದು ಅಮೇರಿಕೆಯಲ್ಲಿ; ಗ್ರೇಟ ಬ್ರಿಟನ್, ಜಪಾನ, ಫ್ರಾನ್ಸ, ಜರ್ಮನಿ ಮೊದಲಾದವುಗಳೂ ರಬ್ಬರಿನ ಉಪ ಯೋಗವನ್ನು ಹಲವಾರು ಬಗೆಗಳಿಂದ ಮಾಡಿಕೊಳ್ಳುತ್ತಿವೆ. ೧೮೮೬ರಲ್ಲಿ ರಬ್ಬರಿನ ಕಾರಖಾನೆಯು ಇಲ್ಲಿ ತಲೆಯೆತ್ತಿದರೂ, ಇತ್ತೀಚೆಗೆ ಅದರ ಹುಟ್ಟುವಳಿಯು ಬಹಳ ಬೆಳೆದಿದೆ. ಜಪಾನಿನಲ್ಲಿ ಕೂಲಿಯು ಕಡಿಮೆ; ಹೆಚ್ಚು ವೆಚ್ಚವಿಲ್ಲದೆ ಸಾಮಾನು ತಯಾರಿಸುವ ಅನುಕೂಲವಿರುವುದನ್ನು ಕಂಡು ಇಂಗ್ಲಂಡಿನ ಡನಲಪ್ ಕಂಪನಿಯವರು ಒಂದು ಕಾರಖಾನೆ ಯನ್ನು ಇಲ್ಲಿ ತೆರೆದರು. ಇಂದಿಗೂ ಈ ಕಂಪನಿಯು ತನ್ನ ಸಾಮಾನು

ಗಳನ್ನು ತಯಾರಿಸಿ, ಬಹುಪ್ರಮಾಣದಲ್ಲಿ ಮಾರುತ್ತಲೇ ಇದೆ. ೧೯೦೬ ರಲ್ಲಿ ಮಾತ್ರ ಸರಕಾರವು ಪರದೇಶದ ರಬ್ಬರಿನ ಮೇಲೆ ೧೦೦ಕ್ಕೆ ೨೦ ರಂತೆ ಕರವನ್ನು ಹೇರಿದ್ದರಿಂದ ದೇಶೀಯ ರಬ್ಬರು ವ್ಯವಸಾಯವು ಕ್ರಮೇಣ ವಾಗಿ ಬೆಳೆಯಲವಕಾಶವಾಯಿತು. ೧೯೦೦ರಿಂದ ೧೯೩೪ರ ವರೆಗೆ ಒಟ್ಟು ೭೬೫ ಕಾರಖಾನೆಗಳು ಸ್ಥಾಪಸವಾಗಿ ರಬ್ಬರನ್ನು ಹೊರಡಿಸುತ್ತಿವೆ. ಜಪಾನಿನ ರಬ್ಬರಿಗೆ ಗಿರಾಕಿಗಳು ಬೇಕಾದ ಹಾಗೆ ದೊರೆಯುವುದರಿಂದ ಹುಟ್ಟುವಳಿಯಾವರೂ ಮಿತಿಮೀರಿ ಬೆಳೆದಿದೆ.

ಮೊಟ್ಟಮೊದಲು (೧೯೦೭ರಲ್ಲಿ) ರಬ್ಬರಿನ ಬೂಟನ್ನು ತಯಾರಿಸುವ ರೀತಿಯನ್ನು ಕಂಡುಹಿಡಿದವರು ಜಪಾನಿಯರು. ಈ ಬೂಟುಗಳನ್ನು ಕಡಿಮೆ ಬೆಲೆಗೆ ಮಾರುವುದರಿಂದ ಪರದೇಶದವರು ಇವುಗಳ ಮೇಲೆ ೧೦೦-೨೦೦ರ ವರೆಗೆ ಸುಂಕವನ್ನು ಹೇರಿ ಈ ವ್ಯವಹಾರವನ್ನು ನಿಲ್ಲುವಂತೆ ಮಾಡಲೆಳಸಿದರೂ ಇವರ ಬೂಟಿನ ವ್ಯವಹಾರವು ಇನ್ನೂ ಹೆಚ್ಚಾಗಿಯೇ ಬೆಳೆಯತೊಡಗಿದೆ ಹೊರತು ಯಾವ ವಿಧದಲ್ಲಿಯೂ ಕಡಿಮೆಯಾಗಲಿಲ್ಲ. ರಬ್ಬರಿನ ಕೈಗಾರಿಕೆಯೂ ಜಪಾನಿನ ಸಣ್ಣಪುಟ್ಟ ಕೈಗಾರಿಕೆಗಳಲ್ಲೊಂದಾಗಿದೆ. ಈ ೭೬೫ ಕಾರಖಾನೆಗಳಲ್ಲಿ ೩೬೦೮೭ ಕೂಲಿಯವರು ದುಡಿಯುತ್ತಾರೆ. ಇವರಲ್ಲಿ ನೂರಕ್ಕೆ ೭೧ರಂತೆ ಸ್ತ್ರೀಯರಿರುವರು. ೬೦ ಸೆನ್ನುಗಳಿಂದ ೨ ಎನ್ನುಗಳ ವರೆಗೆ ಇಲ್ಲಿ ಕೂಲಿಯು ದೊರೆಯುವುದು. ರಬ್ಬರಿನ ಕಾರಖಾನೆಗಳು ವರ್ಷಂಪ್ರತಿ ಲಾಭವನ್ನು ಪಡೆಯುತ್ತಲೇ ಇವೆ.

ಜಪಾನಿಯರು ೧೯೦೬ರಲ್ಲಿ ಮಲಯಾದೇಶದಲ್ಲಿ ಭೂಮಿಯನ್ನು ಕೊಂಡುಕೊಂಡು ರಬ್ಬರ್ ಗಿಡಗಳನ್ನು ಬೆಳೆಯಿಸಲು ಪ್ರಾರಂಭಿಸಿದರು. ಈ ಮರಗಳನ್ನು ಬೆಳೆಸುವದಕ್ಕೆ ಜಪಾನಿಯರ ದೊಡ್ಡ ದೊಡ್ಡ ಕಂಪನಿಗಳು ಮಲಯಾ, ಸುಮಾತ್ರಾಗಳಲ್ಲಿ ತೊಡಗಿರುತ್ತವೆ. ವ್ಯವಸಾಯದ ಕುಶಲತೆಯುಳ್ಳ ಈ ಜನಾಂಗವು "ಮುಟ್ಟಿದುದು ಚಿನ್ನ"ವೆಂಬಂತೆ ಯಾವ ಕೈಗಾರಿಕೆಯನ್ನೇ ಕೈಕೊಳ್ಳಲಿ, ಅದರ ಪ್ರಗತಿಯ ಶಿಖರವನ್ನು ಮುಟ್ಟದೆಂದಿಗೂ ಬಿಡರು. ಅದರಂತೆ ಜಪಾನಿಯರು ಎಲ್ಲ ವಿಧದ ಕೈಗಾರಿಕೆಗಳಲ್ಲಿ ಇಂದು ನಿಷ್ಣಾತರಾಗಿ, ಕುಶಲರಾಗಿ ಬಲಶಾಲಿಯಾದ ರಾಷ್ಟ್ರದ ಸುಪ್ರಜೆಗಳಾಗಿ ಬಾಳುತ್ತಿದ್ದಾರೆ.

ಕಾಗದದ ಕೈಗಾರಿಕೆ:—ಕಳೆದ ೧೨ ಶತಮಾನಗಳಿಂದ ಸೊಪ್ಪು-ಸೂದೆಗಳಿಂದ ಕಾಗದವನ್ನು ತಯಾರಿಸುವ ಕಸುಬು ಜಪಾನಿನಲ್ಲಿ ನಾಗುತ್ತ ಬಂದಿದೆ. ೧೮೭೪ರಲ್ಲಿ ಒಬ್ಬ ಇಂಗ್ಲಿಷ ಇಂಜನಿಯರನ ಸಹಾಯದಿಂದ ಟೋಕಿಯೋ ನಗರದಲ್ಲಿ ಕಾಗದವನ್ನು ತಯಾರಿಸುವ ಕಾರಖಾನೆಯೊಂದು ಸ್ಥಾಪಿತವಾಯಿತು. ಮರದ ತಿರಳಿನಿಂದ ಕಾಗದವನ್ನು ತಯಾರಿಸುವದು ೧೮೮೯ರಲ್ಲಿ ರೂಢಿಗೆ ಬಂದಿತು. ೧೮೮೧ರಲ್ಲಿ ಪರದೇಶದ ತರಹದ ಕಾಗದದ ಉತ್ಪತ್ತಿಯು ಕೇವಲ ೩೯೬೮೦೦೦ ಪೌಂಡುಗಳಷ್ಟಿದ್ದಿತು. ಆದರೆ ೧೯೨೯ರಲ್ಲಿ ೧೪೧೮೧೮೭೦೦೦ ಪೌಂಡುಗಳಷ್ಟು ಬೆಳೆಯಿತು.

ಕಾಗದ ಕಾರಖಾನೆಗಳಲ್ಲಿ "ಓಜಿ ಕಾಗದ ಕಂಪನಿ"ಯೇ ದೊಡ್ಡ ಕಾರಖಾನೆಯು. ಈ ಕಂಪನಿಯ ಭಾಂಡವಲವು ೫೦ ಕೋಟಿ ಎನ್ನುಗಳಿದ್ದು, ಪರದೇಶದ ತರಹದ ಕಾಗದದ ಉತ್ಪತ್ತಿಯಲ್ಲಿ ೧೦೦ಕ್ಕೆ ೮೫ರಷ್ಟು ಈ ಕಂಪನಿಯಲ್ಲಿ ತಯಾರಾಗುತ್ತಿದೆ. ೧೯೩೬ರಲ್ಲಿ ೨೭೫೦೦೦೦೦ ಎನ್ನು ಬೆಲೆ ಬಾಳುವ ೨೨೫೦೦೦೦೦೦ ಪೌಂಡು ಕಾಗದವು ಪರದೇಶಕ್ಕೆ ಕಳಿಸಲ್ಪಟ್ಟಿತು. ಅದರಂತೆ ಅದೇ ವರುಷದಲ್ಲಿ ೧೯೩೦೦೦೦೦ ಪೌಂಡು ತೂಕದ, ೧೬೦೦೦೦೦೦ ಎನ್ನು ಬೆಲೆಯಾಗುವ ಕಾಗದವು ಜಪಾನದೇಶಕ್ಕೆ ಬಂದಿತು. ಈಗ ಚೀನಾದೇಶದಲ್ಲಿ ಜಪಾನಿ ವಸ್ತುಗಳಿಗೆ ಬಹಿಷ್ಕಾರ ಹಾಕುತ್ತಿದ್ದಾರೆ. ಒಮ್ಮೆ ಅದು ನಿಲ್ಲಿಸಲ್ಪಟ್ಟರೆ ಮತ್ತೆ ಕಾಗದದ ನಿರ್ಯಾತವು ಭರದಿಂದ ಸಾಗಬಹುದು. ವಿದ್ಯಾಭ್ಯಾಸವು ಕಡ್ಡಾಯವಾಗಿರುವದರಿಂದ ಜಪಾನಿಯರು ಕಾಗದವನ್ನು ಬಹು ವಿಧವಾಗಿ ಉಪಯೋಗಿಸುತ್ತಾರೆ. ಕರವಸ್ತ್ರಕ್ಕೂ ಕಾಗದವನ್ನೇ ಉಪಯೋಗಿಸುವರು. ಹೀಗಾಗಿ ಕಾಗದದ ಹುಟ್ಟುವಳಿಯು ಬೆಳೆಯುತ್ತಲಿದೆ; ಬೆಳೆದಷ್ಟು ವೆಚ್ಚವಾಗುತ್ತಿದೆ. ಅಂದ ಮೇಲೆ ಈ ಕೈಗಾರಿಕೆಯು ಎಂದೆಂದಿಗೂ ಊರ್ಜಿತಾವಸ್ಥೆಯಲ್ಲಿರುವದರಲ್ಲಿ ಸಂದೇಹವಿಲ್ಲ.

## ಹಡಗು ಕಟ್ಟುವದು

೧೮೫೩ರಲ್ಲಿ ಅಮೇರಿಕೆಯಿಂದ ನಾಲ್ಕು ಕಬ್ಬಿಣದ ಹಡಗುಗಳು ಜಪಾನಕ್ಕೆ ಬಂದು ಅಲ್ಲಿಯವರಿಗೆ ದಿಗ್ಭ್ರಮೆಯನ್ನುಂಟುಮಾಡಿದವು.

ಆಗ ಅಲ್ಲಿ ಅವ್ಯವಸ್ಥಿತವಾದ ಪಾಳೆಯಗಾರರ ಆಡಳಿತೆಯು ನೆಲೆಸಿತ್ತು. ಅವರು ಪರದೇಶದವರಿಗೆ ತಲೆಬಗ್ಗಿಸಿ ಅವರಿಗೆಲ್ಲ ಅನುಕೂಲತೆಗಳನ್ನು ಒದಗಿಸಿಕೊಟ್ಟರು. ಆದರೆ ೧೮೬೮ರಲ್ಲಿ ಮೇಜೀ ಚಕ್ರವರ್ತಿಗಳ ಹೊಸ ರಾಜ್ಯ ಸ್ಥಾಪನೆಯಾಯಿತು. ಆಗ ಸರಕಾರವು ದೇಶದ ಕಲ್ಯಾಣವಾಗಬೇಕಾದರೆ ಭೂ-ಜಲ ಸೈನ್ಯಗಳ ಪಡೆಯಿಂದಲೇ ಎಂಬ ಮಾತನ್ನರಿತು, ಯುದ್ಧ ಹಾಗೂ ವ್ಯಾಪಾರದ ಹಡಗುಗಳನ್ನು ಕಟ್ಟುವದಕ್ಕೆ ಪ್ರೋತ್ಸಾಹನವನ್ನಿತ್ತಿತು. ಹಡಗು ಕಟ್ಟುವ ವಿದ್ಯೆ ಗೊತ್ತಿಲ್ಲದ್ದರಿಂದ ಫ್ರಾನ್ಸ, ಅಮೇರಿಕೆಯ ಇಂಜನಿಯರರ ಸಹಾಯದಿಂದ ಜಪಾನಿಯರು ಹಡಗು ಕಟ್ಟುವ ವಿದ್ಯೆಯನ್ನು ಕಲಿತುಕೊಂಡರು. ೧೯೦೦ರ ವರೆಗೆ ಈ ವಿದ್ಯೆಯಲ್ಲಿ ಪಾಶ್ಚಿಮಾತ್ಯರೇ ಮಾರ್ಗದರ್ಶಕರಾಗಿದ್ದರು. ಇಂದಿಗೆ ಬೇಕಾದ ಹಾಗೆ ಬೇಕಾದಂಥ ಯುದ್ಧದ ಹಡಗುಗಳನ್ನು ಸಹ ಕಟ್ಟಬಲ್ಲರು.

೧೯೦೭ರ ಕಾಲಕ್ಕೆ ಒಂದು ತಾಸಿಗೆ ೨೦ ಮೈಲುಗಳ ವೇಗದಲ್ಲಿ ಓಡುವ (20.6 Knots), ೧೩ ಸಾವಿರ ಟನ್ನುಗಳ ಎರಡು ವ್ಯಾಪಾರದ ಹಡಗುಗಳನ್ನು ಜಪಾನಿಯರು ಕಟ್ಟಿದರು. ೧೯೧೨ರ ಕಾಲಕ್ಕೆ ಇಲ್ಲಿಯ ಹಡಗು ಕಟ್ಟುವ ಅಂಗಳಗಳು ಮೂರು ಉಗಿಯಂತ್ರಗಳನ್ನೂ, ಪರಸನ್ ಟರ್ಬಾಯಿನ್‌ಗಳುಳ್ಳ ಹಡಗುಗಳನ್ನೂ ಕಟ್ಟಲು ಶಕ್ತವಾದುವು. ಮಹಾಯುದ್ಧದ ಮೊದಲು ಸಾವಿರ ಟನ್ ತೂಕದ ಹಡಗುಗಳನ್ನು ಕಟ್ಟಲು ೬ ಅಂಗಳಗಳು, ೧೭ ಉಗ್ರಾಣಗಳಿದ್ದವು. ಆದೇ ೧೯೧೭ರ ಹೊತ್ತಿಗೆ ೫೭ ಅಂಗಳಗಳು, ೧೫೭ ಉಗ್ರಾಣಗಳಾದುವು. ಇದರಂತೆಯೇ ಹಡಗು ಕಂಪನಿಗಳ ಒಟ್ಟು ಭಾಂಡವಲು ೨೩ ಕೋಟಿ ಎನ್ನುಗಳಿಂದ ೧೨ ಕೋಟಿ ಎನ್ನುಗಳವರೆಗೇರಿತು. ಕೂಲಿಕಾರರ ಸಂಖ್ಯೆಯೂ ೨೬೦೦೦ದಿಂದ ಒಂದು ಲಕ್ಷದವರೆಗೆ ಮುಟ್ಟಿತು. ಹಡಗುಪಡೆಯು ಬೆಳೆಯಬೇಕಾದರೆ ದೇಶದ ಯಾವತ್ತೂ ಕೈಗಾರಿಕೆಗಳು ಪೂರ್ಣಾವಸ್ಥೆಯಲ್ಲಿರಬೇಕಾಗುತ್ತವೆ. ಸ್ಟೀಮ ಎಂಜಿನ್, ಟರ್ಬಾಯಿನ್ಸ, ಪಂಪುಗಳು ಇವೇ ಮೊದಲಾದವುಗಳು ಸುಲಭವಾಗಿ ದೊರೆಯುತ್ತಿದ್ದರೆ ಮಾತ್ರ ಕಟ್ಟಲನುವಾಗುವದು. ಹತ್ತು ವರ್ಷಗಳ ಕೆಳಗೆ ಇಂಗ್ಲಂಡಿನ ಹಡಗಿನ ಕಂಪನಿಗಳು ಜಪಾನಿಗಿಂತ ಬೆಲೆಯಲ್ಲಿ ನೂರಕ್ಕೆ ೨೦ರಂತೆ ಕಡಮೆಯಾಗಿ ಹಡಗುಗಳನ್ನು ಕಟ್ಟುತ್ತಿ

ದ್ದವು. ೧೯೩೧ರಿಂದ ಜಪಾನ ನಾಣ್ಯದ ಬೆಲೆ ಇಳಿದದ್ದರಿಂದ, ಇಂದು ಜಪಾನಿಯರು ಇಂಗ್ಲಂಡಿನವರಿಗಿಂತ ೨೦ರಷ್ಟು ಕಡಮೆಯಾಗಿ ಕಟ್ಟುವ ಶಕ್ತಿಯುತರಾಗಿದ್ದಾರೆ.

ಜಪಾನವು ದ್ವೀಪವಿದ್ದು, ಕೈಗಾರಿಕೆಗಳ ಆಗರವಾಗಿದ್ದರಿಂದ ಈ ಹಡಗಿನ ಉದ್ಯಮವು ಜೋರಾಗಿ ನಡೆಯಲು ಆಸ್ಪದವಿದೆ. ೧೮೭೦ರಲ್ಲಿ ಇಡಿ ವ್ಯಾಪಾರದ ಹಡಗುಗಳ ತೂಕವು ೨೪೦೦೦ ಟನ್ನಗಳಷ್ಟಿದ್ದಿತು. ಚೀನಾ-ಜಪಾನ, ರಶಿಯಾ-ಜಪಾನ, ಮಹಾಯುದ್ಧ ಮೊದಲಾದವುಗಳಿಂದ ದೊರೆತ ಸುಸಂಧಿಯಿಂದ ಇಲ್ಲಿ ವ್ಯಾಪಾರದ ಹಡಗುಗಳು ಹೆಚ್ಚಾಗಿರುವವು. ಇಂದಿಗೆ ವ್ಯಾಪಾರದ ಹಡಗುಗಳ ತೂಕವು ೪೦ ಲಕ್ಷ ಟನ್ನಾಗಿದೆ. ಮತ್ತು ಇಡಿ ಜಗತ್ತಿನಲ್ಲಿಯೇ ಮೂರನೆಯ ನಂಬರಿನದಾಗಿರುತ್ತದೆ. ‘ಉದಯಿತ ಸೂರ್ಯ ಪತಾಕೆಯುಳ್ಳ ಜಪಾನಿಯರ ಹಡಗುಗಳು ಕಾಣದ ಬಂದರಗಳೇ ಇರುವದಿಲ್ಲ.’

ಸಮುದ್ರಸಂಚಾರದಲ್ಲಿ ಗ್ರೇಟ ಬ್ರಿಟನ್ನವು ೨ ಕೋಟಿ ಟನ್ನುಗಳ ಸಾವಿರಾರು ವ್ಯಾಪಾರದ ಹಡಗುಗಳುಳ್ಳದ್ದಾಗಿ ಪ್ರಪಂಚದಲ್ಲಿಯೇ ಪ್ರಥಮ ಸ್ಥಾನವನ್ನು ಪಡೆದಿದೆ. ೧ ಕೋಟಿ ೨೦ ಲಕ್ಷ ಟನ್ನು ಹಡಗುಗಳಿಂದ ಅಮೇರಿಕೆಯು ದ್ವಿತೀಯ ಸ್ಥಾನಾಪನ್ನವಾಗಿದೆ. ೪೦ ಲಕ್ಷ ಟನ್ನು ಹಡಗವಿದ್ದಂಥ ಜಪಾನವು ತೃತೀಯ ಸ್ಥಾನದಲ್ಲಿದೆ. ಈ ಉದ್ಯಮದ ಪ್ರಗತಿಯನ್ನು ಪರಿಶೀಲಿಸಿದರೆ ಜಪಾನು ೧೦೦ಕ್ಕೆ ೧೩೮ರಂತೆ ಮುಂದುವರಿದಿದೆಯೆಂದು ಕಂಡುಬಂದಿದೆ. ಅದೇ ಗ್ರೇಟ್ ಬ್ರಿಟನ್ನವು ೬ರಂತೆ ಮುಂದುವರಿಯುತ್ತಲಿದೆ. ಗ್ರೇಟ ಬ್ರಿಟನ್ನದ ಹಡಗುಪಡೆಗಳು ಯುದ್ಧದ ಮೊದಲು ಕಲ್ಲಿದ್ದಲಿಗಳನ್ನು ಹೇರಿಕೊಂಡು ಪರದೇಶಗಳಿಗೆ ಹೋಗುತ್ತಿದ್ದವು. ಆದರೆ ಈಗ ಕಲ್ಲಿದ್ದಲಿಯ ಉಪಯೋಗವೇ ಕಡಮೆಯಾದ್ದರಿಂದ ಹಡಗುಗಳೂ ಕಡಮೆಯಾದವು. ಜಪಾನದ ಸರಕುಗಳೆಲ್ಲವೂ ಬಹುತೇಕವಾಗಿ ಜಪಾನದ ಹಡಗುಗಳಿಂದಲೇ ರವಾನಿಸಲ್ಪಡುತ್ತಿವೆ. ಆ ಹಡಗಗಳಿಂದಲೇ ಪರದೇಶದ ಸರಕು ಇಲ್ಲಿಗೆ ಬರುತ್ತವಾದ್ದರಿಂದ ಇವರ ಉದ್ಯಮವು ಬೆಳೆಯಲು ಕಾರಣವಾಯಿತು. ಸಮಗ್ರ ಏಶಿಯಾ

ಖಂಡದಲ್ಲಿ ಹಡಗ ಕಟ್ಟುವ ದೇಶವೆಂದರೆ ಜಪಾನುವೊಂದೇ ಇರುವದರಿಂದ ಇದರ ಪ್ರಗತಿಗೆ ಯಾವ ತೊಂದರೆಯುಂಟಾಗುವಂತಿಲ್ಲ. ಇತ್ತೀಚೆ ಯುದ್ಧದ ವಾತಾವರಣವು ತಾಂಡವವಾಡುತ್ತಿದ್ದದರಿಂದ ಪ್ರತಿಯೊಂದು ರಾಷ್ಟ್ರವು ತನ್ನ ಹಡಗುಪಡೆಯನ್ನು ಹೆಚ್ಚಿಸುತ್ತಿರುವದರಿಂದ ಕೂಲಿಕಾರರಿಗೆ ಬಹಳೇ ಪ್ರಯೋಜನಕಾರಿಯಾಗಿದೆಯೆಂದು ಹೇಳಬಹುದು.

## ಇಂದಿನ ಜಪಾನು

೬೦ ವರುಷಗಳ ಹಿಂದೆ ಜಪಾನು ವ್ಯವಸಾಯ ದೇಶವಾಗಿತ್ತು. ಆದರೆ ಇಂದು ಕೈಗಾರಿಕೆಯ ದೇಶವಾಗಿದೆ. ಜನಸಂಖ್ಯೆಯ ೫೨ರ ಭಾಗವು ಕೈಗಾರಿಕೆಗಳಿಂದ ಜೀವಿಸುತ್ತಿರುವುದು. ಸರಕಾರದ ಪ್ರೋತ್ಸಾಹನವು ದೊರಕದಿದ್ದರೆ ಇಷ್ಟು ಅವಧಿಯಲ್ಲಿ ಇಷ್ಟು ಪ್ರಗತಿಪರ ರಾಷ್ಟ್ರವಾಗಲು ಶಕ್ಯವಿರಲಿಲ್ಲ. ೧೦ ವರುಷಗಳ ಅವಧಿಯಲ್ಲಿ ನೂರಕ್ಕೆ ೧೦೦ರಂತೆ ಕೈಗಾರಿಕೆಗಳು ಬೆಳೆದು ಬಿಟ್ಟಿವೆ. ಇಲ್ಲಿ ೫ ಕೂಲಿಗಳುಳ್ಳ ಕಾರಖಾನೆಯೂ ಕಾರಖಾನೆಗಳ ಕಾಯ್ದೆಗೊಳಪಡುತ್ತಿದೆ. ನೇಯ್ಗೆ, ಲೋಹ, ಸರಕು, ಯಂತ್ರಗಳು, ಮಣ್ಣಿನ ಸಾಮಾನು, ರಸಾಯನ, ಮರದಕೆಲಸ, ಮುದ್ರಣ, ಆಹಾರ ಪದಾರ್ಥ, ಗಾಜು, ವಿದ್ಯುಚ್ಛಕ್ತಿ ಮೊದಲಾದುವೆಲ್ಲ ಕೂಡಿ ಜಪಾನಿನಲ್ಲಿ ೮೫೧೭೪ ಕಾರಖಾನೆಗಳಿವೆ. ಅವುಗಳಲ್ಲಿ ೨೩೬೯೨೭೭ ಕೂಲಿಯವರಿರುವರು. ಇವರಲ್ಲಿ ೧೨೮೭೫೭೫ ಗಂಡಸರು, ೧೦೮೧೭೦೨ ಹೆಂಗಸರಿದ್ದಾರೆ. ಈ ಸ್ತ್ರೀ ಕೂಲಿಕಾರರಲ್ಲಿ ೮೧೨೮೩೭ ಹೆಂಗಸರು ಹತ್ತಿಯ ಕಾರಖಾನೆಯೊಂದರಲ್ಲೇ ದುಡಿಯುತ್ತಿದ್ದಾರೆ. ೧೯೩೫ರ ಕೊನೆಗೆ ೭೩೩೦೨ ಕಾರಖಾನೆಗಳು ೮೭೫೩೬ ಮೋಟಾರುಗಳ ಸಹಾಯದಿಂದ ಸಾಮಾನು ತಯಾರಿಸುತ್ತಿದ್ದುವು. ಒಂದು ಸಾವಿರ ಕೋಟಿ ಎನ್ನುಗಳ ಮಾಲು ಹುಟ್ಟಿತು. ತಯಾರಾದ ಒಟ್ಟು ಮಾಲಿನಲ್ಲಿ ನೂರಕ್ಕೆ ೩೩ರಂತೆ ಹತ್ತಿಯ ಬಟ್ಟೆಗಳಾಗಿದ್ದುವು.

ಅಧಿಕಾರಿಗಳ ಗಣನೆಗೆ ಸಿಗದಿರುವ ೫ ಜನರಿಗಿಂತ ಕಡಿಮೆಯಿರುವ ಕಾರಖಾನೆಗಳಲ್ಲಿ ಸಾವಿರಾರು ಜನರು ಹೊಟ್ಟೆ ಹೊರೆಯುವರು. ಈ ಮನೆತನದ ಕೈಗಾರಿಕೆಗಳಲ್ಲಿಯೂ ಒಳ್ಳೇ ಮಾಲು ತಯಾರಾಗುವುದು.

ನಿರ್ಯಾತವಾಗುವ ಒಟ್ಟು ಮಾಲಿನಲ್ಲಿ ೩೦ರಷ್ಟು ಭಾಗವು ಇಂಥ ಕಾರಖಾನೆಗಳಲ್ಲಿ ತಯಾರಾಗುತ್ತಿದೆಯೆಂದು ನುರಿತ ಲೆಕ್ಕಿಗರು ಕಂಡು ಹಿಡಿದಿದ್ದಾರೆ.

ಜಪಾನವು ಜಗತ್ತಿನ ವ್ಯವಸಾಯ ಕ್ಷೇತ್ರದಲ್ಲಿ ತನ್ನದೊಂದು ಶಾಶ್ವತವಾದ ಸ್ಥಾನವನ್ನು ಮಾಡಿಕೊಂಡಂದಿನಿಂದ ಕೆಲವು ಪಾಶ್ಚಿಮಾತ್ಯರು ಹಲವಾರು ಬಗೆಯಿಂಪ ಆಕ್ಷೇಪಗಳನ್ನೆತ್ತಿದ್ದಾರೆ. ಅವುಗಳಲ್ಲಿ (೧) ಜಪಾನಿಯರು ತಮ್ಮ ದೇಶದಲ್ಲಿ ಮಾಲನ್ನು ಮಾರುವ ದರಕ್ಕಿಂತಲೂ ಪರದೇಶದಲ್ಲಿ ಕಡಿಮೆ ದರಕ್ಕೆ ಮಾರುತ್ತಾರೆ. (೨) ಕೂಲಿಕಾರರಿಗೆ ತೀರ ಕಡಿಮೆ ಕೂಲಿ ದೊರೆಯುತ್ತದೆ. (೩) ಕೂಲಿಕಾರರ ದುಡಿತದ ತಾಸುಗಳು ಹೆಚ್ಚಿಗಿರುವವು, ಎಂಬವು ಮುಖ್ಯವಾಗಿರುತ್ತವೆ. ಜಪಾನು ಹೀಗೆ ಕೈಗಾರಿಕೆ ದೇಶವಾಗುವುದಕ್ಕೆ ಪಾಶ್ಚಿಮಾತ್ಯ ದೇಶಗಳೇ ಕಾರಣವಾಗಿವೆ. ಜಪಾನದಲ್ಲಿ ಮೇಲು ಕೀಳು ಜಾತಿಯ ಬಟ್ಟೆಯು ಹುಟ್ಟುವುದರಿಂದ ಬೆಲೆಯು ಮಾಲಿನ ಮೇಲೆ ಅವಲಂಬಿಸಿರುವುದು. ಅವರು ಕಡಿಮೆ ಬೆಲೆಗೆ ಮಾರುತ್ತಾರೆಂಬ ಮಾತು ನಿರಾಧಾರವಾಗಿದೆ. ಬೆಲೆಯ ಇಳಿತವೇ ಇದಕ್ಕೆ ಎಷ್ಟೋಮಟ್ಟಿಗೆ ಸಹಾಯವಾಗಿರುವುದು. ವಿದ್ಯಾವಂತರಾದ ಕೂಲಿಯವರಿರುವುದರಿಂದ ಕೆಲಸವು ಚೊಕ್ಕಾಗುವುದು; ಮನಸ್ಸಿಗೆ ಹಚ್ಚಿಕೊಂಡು ದುಡಿಯುವರು. ಯಜಮಾನ-ಕೂಲಿಕಾರರೆಂಬ ಬಡಿದಾಟ ವಿರುವುದಿಲ್ಲ. ಪರಸ್ಪರಾವಲಂಬಿಗಳಾಗಿ ಪರಸ್ಪರರ ಕಲ್ಯಾಣಕ್ಕಾಗಿ ಹೆಣಗುತ್ತಾರೆ. ಹೊರಗಿನವರ ದೃಷ್ಟಿಯಲ್ಲಿ ಜಪಾನಿಯರ ಬಾಳಿನ ಮೆಟ್ಟಲು ಬಹು ಕಡಿಮೆಯೆಂದಿದ್ದರೂ, ತಕ್ಕುದಾದ ರೀತಿಯಲ್ಲಿ ಅವರು ತಮ್ಮ ಜೀವನವನ್ನು ಸಾಗಿಸುತ್ತಾರೆ. ಕಡಿಮೆ ಗಳಿಕೆಯೆಂದು ಗ್ರಹಿಸಿದರೆ, ಸಾಮಾನು ಅಗ್ಗವಾಗಿ ದೊರೆಯುವವು. ಸಾಧಾರಣವಾಗಿ ಜಪಾನಿಯನ ಆಯುರ್ಮರ್ಯಾದೆಯು ೪೫ ವರ್ಷಗಳೆಂದು ಗೊತ್ತುಪಡಿಸಲ್ಪಟ್ಟಿದೆ. ಇವರ ಜೀವನವು ತೀರ ಬಡತನವಿದ್ದುದಾದರೆ ನಮ್ಮ ಭಾರತೀಯನ ಆಯುರ್ಮರ್ಯಾದೆಗಿಂತ ೨೧ ವರುಷ ಹೆಚ್ಚಿಗೆ ಬದುಕುತ್ತಿದ್ದಿಲ್ಲವೆಂಬುವುದು ಸ್ಪಷ್ಟವಿದೆ.

ಸಾಧಾರಣವಾಗಿ ೮, ೧೮, ೨೮ ತಾರೀಖುಗಳಲ್ಲಿ ಕೆಲಸಗಾರರಿಗೆ

ರಜೆಯು ದೊರೆಯುವುದು. ಈ ದೇಶವು ಕ್ರಿಶ್ಚಿಯನ್ನರ ಆಂದೋಲನದಲ್ಲಿ ಸಿಕ್ಕಿದ್ದರೂ ರವಿವಾರವು ಸಾರ್ವಜನಿಕ ವಿರಾಮ ದಿನವೆಂದು ಭಾವಿಸಲ್ಪಡುವುದಿಲ್ಲ. ರಾಜಮನೆತನಕ್ಕೆ ಸಂಬಂಧಪಟ್ಟ ಹತ್ತು ದಿನಗಳು ಮಾತ್ರ ಸಾರ್ವಜನಿಕ ಬಿಡುವು ದಿನಗಳೆಂದು ತಿಳಿಯಬೇಕೆ ಹೊರತಾಗಿ ಆಯಾ ಧರ್ಮದ ನಿಮಿತ್ಯವಾಗಿ ರಜೆಯ ದಿನಗಳು ಕೊಡಲ್ಪಡುವುದಿಲ್ಲ. ಪ್ರಜೆಗಳ ಸಂಖ್ಯೆಯಲ್ಲಿ ೧೦ಕ್ಕೆ ೯ರಷ್ಟು ಬೌದ್ಧ ಧರ್ಮಿಯರಿದ್ದರೂ ಇವರಿಗಾಗಿ ಒಂದು ರಜೆಯ ದಿನವೂ ಇರುವುದಿಲ್ಲ. ಸರಕಾರವು ೧೯೧೧ರಲ್ಲಿ ಕೂಲಿಕಾರರ ವಿಷಯವಾಗಿ ಕಾನೂನುಗಳನ್ನು ಅಮಲಿನಲ್ಲಿ ತಂದಿತು. ೧೯೧೯ರಲ್ಲಿ ಅಂತರ್‌ರಾಷ್ಟ್ರೀಯ ಕೆಲಸಗಾರರ ಸಮ್ಮೇಲನದಲ್ಲಿ ೧೦ ತಾಸುಗಳಿಗಿಂತ ಕೂಲಿಯವರನ್ನು ದುಡಿಸಿಕೊಳ್ಳಬಾರದೆಂಬ ಮಾತನ್ನು ಜಪಾನವೇ ಮಂಡಿಸಿ, ಜಯಶೀಲವಾಯಿತು. ಇಲ್ಲಿ ೧೪ ವರುಷದೊಳಗಿನ ಮಕ್ಕಳನ್ನು ಕೂಲಿಯಾಳುಗಳೆಂದು ದುಡಿಯಲು ಇಟ್ಟುಕೊಳ್ಳುವುದಿಲ್ಲ. ಕೂಲಿಕಾರರ ಸಂಘಗಳೂ ಇರುತ್ತವೆ. ಆದರೆ ಅಷ್ಟೊಂದು ಹುಮ್ಮಸಿನಿಂದ ಕೆಲಸವನ್ನು ಸಾಗಿಸಿರುವುದಿಲ್ಲ. ಕೂಲಿಕಾರರ ತಂಟೆ, ಮುಷ್ಕರ ಹಿಡಿಯುವ ಪ್ರಸಂಗಗಳೇ ಇಲ್ಲಿ ಉಂಟಾಗಲಾರವೆಂತಲೇ ಹೇಳಬೇಕಾಗಿದೆ. ಯಾಕಂದರೆ, ಯಜಮಾನ-ಆಳು ಎಂಬ ಭೇದವು ಕಂಡುಬರುವುದಿಲ್ಲ.

ಇಲ್ಲಿಯ ಪ್ರಜಾಪ್ರತಿನಿಧಿಸಭೆಯ ೪೫೦ ಸದಸ್ಯರಲ್ಲಿ ೩೬ ಸದಸ್ಯರು ಕೆಲಸಗಾರರಿಂದ ಆರಿಸಲ್ಪಟ್ಟಿರುವರು. ಜಪಾನ ಸರಕಾರವು ರಶಿಯಾ ದೇಶದ ತತ್ವವು ಅಲ್ಲಿಯ ಕೆಲಸಗಾರರಲ್ಲಿ ಬೇರೂರಬಾರದೆಂದು ತಕ್ಕ ಉಪಾಯಗಳನ್ನು ಯೋಜಿಸುತ್ತಲಿದೆ. ಕೂಲಿಕಾರರು ರಾಜಕೀಯ ವಿಷಯದಲ್ಲಿ ಬೀಳಬಾರದೆಂಬ ಕಟ್ಟಳೆಯೂ ಇರುವುದು. ೨೧ ವಯಸ್ಸು ಮಿಕ್ಕಿದ ಪ್ರತಿಯೊಬ್ಬ ಗಂಡಸಿಗೂ ಮತಾಧಿಕಾರವಿರುತ್ತದೆ. ಸ್ತ್ರೀಯರಿಗೆ ಮಾತ್ರ ಇನ್ನೂ ಈ ಅಧಿಕಾರವುಂಟಾಗಿರುವುದಿಲ್ಲ.

ಇಲ್ಲಿಯವರು ಮದ್ಯವನ್ನು ನೀರು ಕುಡಿದಂತೆ ಕುಡಿಯುತ್ತಾರೆ. ಮದ್ಯಪಾನಕ್ಕೆ ಯಾವ ಧರ್ಮವೂ ಅಡ್ಡಬರುವುದಿಲ್ಲ. ಹಕ್ಕಿಗಳಿಂದ ತಯಾರಿಸಿದ 'ಸಾತೇ' ಎಂಬ ಮದ್ಯವನ್ನು ಸಾಮಾನ್ಯವಾಗಿ ಎಲ್ಲರೂ

ಕುಡಿಯುತ್ತಾರೆ. ಹೆಂಗಸರು, ಹುಡುಗರು ಮಾತ್ರ ಈ ದುರಭ್ಯಾಸದಿಂದ ಮುಕ್ತರಿರುತ್ತಾರೆ. ಪೇಟೆಯಲ್ಲಿ ಹತ್ತು ಅಂಗಡಿಗಳೊಂದರಂತೆ ಒಂದು ಮದ್ಯದಂಗಡಿಯು ಇದ್ದೇ ತೀರುವದು. ಇತ್ತೀಚೆ ಬೀರು ಕುಡಿಯುವ ಚಟವೂ ಅಂಟಿಕೊಳ್ಳಲಾರಂಭಿಸಿದೆ.

ಕೂಲಿ ಕುಂಬಳಿಯುವರೂ ಶುಭ್ರವಾದ ಬಟ್ಟೆಯನ್ನು ಧರಿಸುತ್ತಾರೆ. ಪಾಶ್ಚಿಮಾತ್ಯರ ಉಡುಪಿನಂತೆ ಇವರೂ ಹ್ಯಾಟ್, ಬೂಟು, ಚಣ್ಣ ಮೊದಲಾದವುಗಳನ್ನು ಹಾಕಿಕೊಳ್ಳುತ್ತಾರೆ. ಕೂಲಿಯುವನು ವಾರಕ್ಕೆ ನಾಲ್ಕು ಸಲ ಸ್ನಾನವನ್ನು ಮಾಡುತ್ತಾನೆ. ಚಳಿಗಾಲದಲ್ಲಿ ಬಿಸಿನೀರು ಕಾಯಿಸಲು ಹೆಚ್ಚು ಹಣದ ಕಲ್ಲಿದ್ದಲು, ಸೌದೆ ಬೇಕಾಗುವುದರಿಂದ ಅನೇಕ ಕೂಲಿಯುವರು ಸಾರ್ವಜನಿಕ ಸ್ನಾನಗೃಹಗಳಿಗೆ ಹೋಗಿ ೬ ಕಾಸು ಕೊಟ್ಟು ಸ್ನಾನವನ್ನು ಮಾಡುತ್ತಾರೆ. ಪೂರ್ವದಲ್ಲಿ ಗಂಡಸರು, ಹೆಂಗಸರು ಒಂದೇ ಸ್ನಾನಗೃಹದಲ್ಲಿ ಸ್ನಾನಮಾಡುತ್ತಿದ್ದರು. ಆದರೆ ಆ ಪದ್ಧತಿಯು ಈಗ ಪಟ್ಟಣಗಳಲ್ಲಿ ಮಾಯವಾಗಿದೆ. ದೂರವಿರುವ ಹಳ್ಳಿಗಳಲ್ಲಿ ಇಬ್ಬರೂ ಏಕತ್ರವಾಗಿ ನಗ್ನದಿಶೆಯಲ್ಲಿ ಸ್ನಾನಮಾಡುವ ಪದ್ಧತಿಯು ಇನ್ನೂ ಅಲ್ಲಲ್ಲಿ ಜೀವಹಿಡಿದುಕೊಂಡಿದೆ.

ಸದ್ಯಕ್ಕೆ ಜಪಾನಿನಲ್ಲಿರುವ ಕೈಗಾರಿಕೆಗಳು ಸಣ್ಣಪ್ರಮಾಣದಲ್ಲಿ ಇರುವದರಿಂದ ಕಡಿಮೆ ಕೂಲಿಯು ದೊರೆಯಲು ಕಾರಣವಾಗಿದೆ. ಕೈಗಾರಿಕೆಗಳು ಜಪಾನಿನಲ್ಲಿ ಊರ್ಜಿತಾವಸ್ಥೆಗೇರಿದರೆ ಕೂಲಿಯು ಕೂಡಾ ಹೆಚ್ಚಾಗಿ ದೊರೆಯುವದು.

ಏಶಿಯಾಖಂಡದ ಜನಾಂಗಗಳಲ್ಲಿ ಜಪಾನದೇಶವೊಂದೇ ಬಲಿಷ್ಠ ರಾಷ್ಟ್ರವಾಗಿ ಇಂದು ಪ್ರಪಂಚದಲ್ಲಿ ತಲೆಯೆತ್ತಿ ಮೆರೆಯುತ್ತಿದೆ. ಈ ದೇಶದ ಪ್ರಗತಿಯನ್ನು ಕಂಡು ಆಶ್ಚರ್ಯಪಡದ ಯಾವ ವಿಚಾರವಂತನೂ ಇರಲಾರನೆನ್ನಬಹುದು.

---

# ಪೋಷಕರು

| | | |
|---|---|---|
| ೧ | ಶ್ರೀ. ಗೌಡರ ಗುರುಶಾಂತಪ್ಪನವರು, ದಾವಣಗೆರೆ | ೫೧-೦-೦ |

## ಹಿತಚಿಂತಕರು

| | | |
|---|---|---|
| ೨ | ಶ್ರೀ. ಎಸ್. ಕೆ. ದೀಕ್ಷಿತ ವಕೀಲ, ಧಾರವಾಡ | ೫-೦-೦ |
| ೩ | ಶ್ರೀ. ಎಸ್. ಕೆ. ಸರಪಳಿ, ಧಾರವಾಡ | ೫-೦-೦ |
| ೪ | ಡಿ. ಚಂಪಾಬಾಯಿ ಮೈಸೂರ | ೫-೦-೦ |
| ೫ | ಎಂ. ಗೋವರ್ಧನರಾಯ | ೫-೦-೦ |
| ೬ | ಶ್ರೀ. ಶ್ರೀನಿವಾಸಾಚಾರ್ಯ ಮಳಗಿ, ವಕೀಲ, ಗದಗ | ೫-೦-೦ |
| ೭ | ಶ್ರೀ. ಜೀವಣರಾವ ಭಂಡಿವಾಡ, ವಿಜಾಪೂರ | ೫-೦-೦ |
| ೮ | ಶ್ರೀ. ರಾಮಕೃಷ್ಣರಾವ ಪ್ಲೀಡರ, ವಿಜಾಪೂರ | ೫-೦-೦ |
| ೯ | ಡಾ. ಎಂ. ಎ. ಪಾಟೀಲ, ಶಿಗ್ಗಾವಿ | ೫-೦-೦ |
| ೧೦ | ಶ್ರೀ. ಕೆ. ಜಿ. ಹಲಸಗಿ, ಧಾರವಾಡ | ೫-೦-೦ |
| ೧೧ | ಶ್ರೀ. ಸ್ವಾಮಿರಾವ ವಿಜಾಪೂರ, ಮಾಸ್ತರ, ಸೂಡಿ | ೫-೦-೦ |
| ೧೨ | ಶ್ರೀ. ಬಳವಂತರಾವ ಬೆಂಗಳೂರ, ನವಲಗುಂದ | ೫-೦-೦ |
| ೧೩ | ಪ್ರೊ. ವ್ಹಿ. ಕೆ. ಆರ್. ವ್ಹಿ. ರಾವ್ ಅಹಮ್ಮದಾಬಾದ | ೫-೦-೦ |
| ೧೪ | ಶ್ರಿ. ಎಸ್. ಎಸ್. ಖಾನೋಳಕರ, ಪೂನಾ | ೫-೦-೦ |
| ೧೫ | ಶ್ರೀ. ವ್ಹಿ. ಎನ್. ಅಡವಿ, ಮುಂಬಯಿ | ೫-೦-೦ |
| ೧೬ | ಶ್ರೀ. ಕೊಣ್ಣೂರ ಹಣಮಂತರಾವ, ಬಿಜಾಪೂರ | ೫-೦-೦ |
| ೧೭ | ಪ್ರೊ. ಎಸ್. ಎಸ್. ಮಾಳವಾಡ, ಧಾರವಾಡ | ೫-೦-೦ |
| ೧೮ | ಪ್ರೊ. ಆರ್. ಎಸ್. ಮುಗಳಿ, ಸಾಂಗಲಿ | ೫-೦-೦ |
| ೧೯ | ಪ್ರೊ. ಆರ್. ವ್ಹಿ. ಜಹಾಗಿರದಾರ, ಧಾರವಾಡ | ೫-೦-೦ |

—